# ಕರ್ಮವೀರ

ಜನಪ್ರಿಯ ಸಚಿತ್ರ ವಾರಪತ್ರಿಕೆ - ಹುಬ್ಬಳ್ಳಿ.

೧೮-೪-೪೯

★

ಬೆಲೆ ಎರಡಾಣೆ




ಮದ್ರಾಸಿನ ಹೊಸ ಮುಖ್ಯಮಂತ್ರಿ ಶ್ರೀ. ಕುಮಾರಸ್ವಾಮಿ ರಾಜಾ

—ಪುಟ ೩ ನೋಡಿರಿ

ಅಂತರ್‌ - ರಾಷ್ಟ್ರೀಯ

# ರಾಷ್ಟ್ರೀಕರಣವೂ ಬ್ರಿಟನ್ನಿನ ಉದ್ಯಮಿಗಳೂ

## ಪ್ರಧಾನೋದ್ಯಮಗಳ ರಾಷ್ಟ್ರೀಕರಣ- ಗಣಿಯೊಡೆಯರ ಮನಃಸಮಾಧಾನ- ಉಚಿತ ಚಿಕಿತ್ಸೆ ಮತ್ತು ಪ್ರಜೆಗಳ ಮೆಚ್ಚಿಗೆ- ಸಾವಕಾರರ ಸಂತಾಪ

**ಬ್ರಿಟನ್ನಿನ ಕೂಲಿಕಾರ ಸರಕಾರವಿಂದು ದೇಶದ ಮುಖ್ಯೋದ್ಯಮಗಳನ್ನು ರಾಷ್ಟ್ರೀಕರಿಸುವ ಧೋರಣವನ್ನು ತಳೆದು ಆ ಪ್ರಕಾರ ಕಲ್ಲಿದ್ದಲಿ, ಉಕ್ಕು ಮುಂತಾದವುಗಳ ಉದ್ಯಮಗಳನ್ನು ಒಂದೊಂದಾಗಿ ರಾಷ್ಟ್ರೀಕರಿಸಿದ್ದಲ್ಲದೆ ವೈದ್ಯಕೀಯ ಉಪಚಾರವನ್ನು ಸಾರ್ವಜನಿಕರಿಗೆ ಉಚಿತವಾಗಿ ಸಿಗುವಂತೆ ಮಾಡಿ ಅದನ್ನೂ ರಾಷ್ಟ್ರೀಕರಿಸಿ ಬಿಟ್ಟಿದೆ. ಇದರಿಂದ ಕೆಲವರಿಗೆ ಸಮಾಧಾನ, ಮತ್ತೆ ಕೆಲವರಿಗೆ ಅರ್ಧ ಸಮಾಧಾನ, ಮಿಕ್ಕವರಿಗೆ ಅಸಮಾಧಾನ ಉಂಟಾಗಿದ್ದರೂ ಈ ದಿಶೆಯಲ್ಲಿ ಸಾಮ್ಯವಾದೀ ಧೋರಣವು ಯಶಸ್ವಿಯಾಗಿ ಸಾಗಲು ಬ್ರಿಟಿಶ್ ಉದ್ಯಮಿಗಳು ನೆರವಾಗುವ ಬುದ್ಧಿಯನ್ನು ತಳೆದಿದ್ದಾರೆ— ಎಂದು ಲಂಡನ್ನಿನಿಂದ ಬಂದ ವರದಿಯನ್ನು "ಯು. ಎಸ್. ನ್ಯೂಸ್ ಎಂಡ್ ವರ್ಲ್ಡ್ ರಿಪೋರ್ಟ್"ನಲ್ಲಿ ಪ್ರಕಟಿಸಲಾಗಿದೆ.**

ಬ್ರಿಟಿಶ್ ವ್ಯಾಪಾರಿವರ್ಗವು ಸಾಮ್ಯವಾದದೊಡನೆ ಹೋರಾಟ ನಡೆಸುತ್ತಿದ್ದರೂ ಅದರೊಡನೆ ಯಥಾಶಕ್ತಿ ಹೊಂದಿಕೊಂಡಿರುವದನ್ನು ಕಲಿಯುತ್ತಿದೆ. ಸಾಮ್ಯವಾದವು ರಾಷ್ಟ್ರದ ಪ್ರಧಾನೋದ್ಯಮಗಳನ್ನು ಕೈಗೆ ತೆಗೆದುಕೊಂಡಾಗ ದಿನಾಗುತ್ತದೆ ಎಂಬದನ್ನು ಆದೀಗ ಅರಿಯತೊಡಗಿದೆ; ಲಾಭ, ಸ್ವಾತಂತ್ರ್ಯ, ಸ್ಪರ್ಧೆ ಮೊದಲಾದ ಉತ್ತೇಜಕಗಳು ಇಲ್ಲದ ಈ ಕಾಲದಲ್ಲಿ ಸಂಬಳ ತೆಗೆದುಕೊಳ್ಳುವ ಸರಕಾರೀ ನೌಕರರಾಗಿ ಬಾಳುವದಕ್ಕೆ ಹೊಂದಿಕೊಳ್ಳತೊಡಗಿದೆ.

### ಗಣಿಯೊಡೆಯರ ಗತಿ

ಮೊದಲು ಸ್ವತಂತ್ರೋದ್ಯಮಿಯಾಗಿದ್ದ ಕಲ್ಲಿದ್ದಲಿ ಗಣಿಯೊಡೆಯನೊಬ್ಬನನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ. ಆವನು ತನ್ನ ಗಣಿಯಲ್ಲಿ ಹಿಂದಕ್ಕಿಂತ ಹೆಚ್ಚು ಕೆಲಸಗಾರರನ್ನು ನಿಯಮಿಸಿಕೊಂಡಿದ್ದನೆನ್ನೋಣ. ಮಿಕ್ಕ ಗಣಿಯೊಡೆಯರಂತೆಯೇ ಇವನಿಗಾದರೂ ಇನ್ನು ಮುಂದೆ ಈ ಸಾಮ್ಯವಾದದ ಕೈಯಿಂದ ಬಿಡಿಸಿಕೊಳ್ಳುವದು ಅಸಾಧ್ಯ ಎಂಬುದು ತಿಳಿದು ಹೋಗಿದೆ. ಈಗಲೂ ಇವನು ತನ್ನ ಮೊದಲಿನ ಉದ್ಯಮದಲ್ಲೇ ಉದ್ಯೋಗಿಯಾಗಿದ್ದಾನೆ; ಆದರೆ ಲಾಭ ಪಡೆವ ಒಡೆಯನಾಗಿ ಅಲ್ಲ-ಸರಕಾರ ನಿಯಮಿಸಿದ ವ್ಯವಸ್ಥಾಪಕನಾಗಿ ಸಂಬಳ ತೆಗೆದುಕೊಂಡು. ಹಿಂದಿನ ಸ್ವತಂತ್ರ ದಿನಗಳ ಬಗ್ಗೆ ಇವನು ಏನೂ ಹೇಳುವದಿಲ್ಲ; ಆದರೂ ಮೊದಲಿಗಿಂತಲೂ ಚೆನ್ನಾಗಿ ಕೆಲಸ ಮಾಡುತ್ತ ಸಂತೋಷದಿಂದ ಇದ್ದಾನೆ.

ಅವನೀಗ ಲಾಭ ನಷ್ಟಗಳ ಬಗ್ಗೆ ತಲೆ ಕೆರೆದುಕೊಳ್ಳಬೇಕಾಗಿಲ್ಲ. ಅವು ಅವನವಲ್ಲವೇ ಅಲ್ಲ. 'ನಾಹಂ ಕರ್ತಾ ಸರಕಾರಃ ಕರ್ತಾ' ಎನ್ನುತ್ತಾನೆ ಆವನೀಗ. ಆದರೆ ಕರ್ತವ್ಯ ನಿರ್ವಹಣ ಮಾಡುವದರಲ್ಲಿ ಮಾತ್ರ ಯಾವ ಲೋಪವನ್ನೂ ಮಾಡುವಂತಿಲ್ಲ. ಚೆನ್ನಾಗಿ ಕೆಲಸ ಮಾಡಿದರೆ ಹೆಚ್ಚಿನ ಸಂಬಳದ ಮೇಲೆ ಎತ್ತೆತ್ತರದ ಸ್ಥಾನಕ್ಕೆ ಏರಬಹುದು. ಕರ್ತವ್ಯದಲ್ಲಿ ನ್ಯೂನತೆ ಬರುವಂತೆ ಮಾಡಿದರೆ ಪದಭ್ರಷ್ಟನಾಗಬಹುದು. ಆದುದರಿಂದ 'ಯೋಗಸ್ಥಃ ಕುರುಕರ್ಮಾಣಿ' ಎಂಬುದೇ ಅವನಿಗೆ ಸಾಮ್ಯವಾದವಿತ್ತಿರುವ ಆದೇಶ.

ಆದರೆ ಅಂಥ ಗಣಿಯೊಡೆಯನಿಗೀಗ ಸರಕಾರದ ಸಂಬಳದಾಳಾದ ಮಾತ್ರದಿಂದ ಬಹಳ ನಷ್ಟವೇನೂ ಉಂಟಾಗಿಲ್ಲ. ಒಂದು ದೃಷ್ಟಿಯಿಂದ ಹೆಚ್ಚಿನ ಲಾಭವೇ ಆಗಿದೆಯೆನ್ನಬೇಕಾಗುತ್ತದೆ. ಅವನ ಸಂಬಳವೇನೋ ಅವನಿಗೆ ಬಹಳ ಲಾಭ ಬರುತ್ತಿದ್ದಕಾಲದ ಸಂಪತ್ತಿಗಿಂತ ಕಡಿಮೆಯೇ ಆಗಿದೆ. ಆದರೆ ಒಮ್ಮೊಮ್ಮೆ ಅವನಿಗೆ ಬಹಳ ನಷ್ಟವೂ ಸಂಭವಿಸುತ್ತಿದ್ದು ಆ ಲಾಭದ ಸಂತೋಷ ಲವಲೇಶವೂ ಉಳಿಯದಷ್ಟು ಕಷ್ಟಕ್ಕೀಡಾಗಬೇಕಾಗಿತ್ತು. ಆದೀಗ ತಪ್ಪಿತು. ನಿರಂತರವೂ ಸುರಕ್ಷಿತವೂ ಆದ ನಿಯತಕಾಲಿಕ ವೇತನ ಸಿಗುತ್ತಿರುವುದು ಮೊದಲಿನ ತನ್ನ ಕಚೇರಿಯ ವ್ಯವಸ್ಥಾಪಕನ ಸ್ಥಾನದಲ್ಲಿ ಕುಳಿದು ಲಾಭಾಲಾಭಗಳನ್ನು ಅನುಭವಿಸುವ ಸ್ಥಿತಿಗೆ ಅವನನ್ನು ಒಯ್ದಿದೆ. ಅದರಲ್ಲೇ ಅವನಿಂದು ತೃಪ್ತನಾಗಿ ಬಾಳುತ್ತಿದ್ದಾನೆ.

ಗಣಿಯ ಆಡಳಿತೆ ಇಂದೂ ಅವನ ಕೈಯಲ್ಲೇ ಇದೆ. ದೈನಂದಿನ ವ್ಯವಹಾರಗಳಾದ ಕೆಲಸಗಾರರನ್ನು ಗೊತ್ತುಮಾಡುವುದು, ಸಂಬಳ ಸಾರಿಗೆ ಹೊತ್ತು ಗುತ್ತುಗಳನ್ನು ನಿರ್ಧರಿಸುವುದು, ಸ್ಥಳೀಯ ಪರಿಸ್ಥಿತಿಗನುಗುಣವಾಗಿ ಕೂಲಿಕಾರ ಸಂಘಗಳೊಡನೆ ಒಪ್ಪಂದಮಾಡಿಕೊಳ್ಳುವುದು ಮೊದಲಾದವನ್ನು ಅವನು ಎಂದಿನಂತೆ ಮಾಡುತ್ತಾನೆ. ಆದರೆ ಅವನ ಮೇಲೆ ಒಬ್ಬ ಸರಕಾರೀ ಪರಿಶೀಲಕನಿರುತ್ತಾನೆ. ಅವನಿಗೆ ವ್ಯವಸ್ಥಾಪಕನು ಆಗಾಗ ತನ್ನ ಕೆಲಸದ ಸ್ಥಿತಿಗತಿಗಳನ್ನು ಕುರಿತು ವರದಿ ಮಾಡುತ್ತಿರಬೇಕು. ಆದರೆ ಈ ಪರಿಸ್ಥಿತಿಯಿಂದ ಅತೃಪ್ತರಾದವರು ಇಲ್ಲವೇ ಇಲ್ಲವೆಂದಲ್ಲ; ಅಲ್ಲಲ್ಲಿ ಸಮರ್ಥ ಕಾರ್ಯನಿರ್ವಾಹಕರು ಕೆಲಸಕ್ಕೆ ರಾಜೀನಾಮೆಕೊಟ್ಟು ಹೋಗುವುದೂ ಉಂಟು. ಅವರಿಗೆ ಸರಕಾರ ನಡೆಸುವ ಈ ಉದ್ಯಮದಲ್ಲಿ ಕಾಣುವ ಅಪವ್ಯಯ ಮತ್ತು ಅಸಾಮರ್ಥ್ಯಗಳನ್ನು ಸಹಿಸಿಕೊಳ್ಳಲು ಬರದು. ಇನ್ನು ಕೆಲವರನ್ನು ಅವಿಧೇಯತೆಗಾಗಿ ಆಗಾಗ ಕೆಲಸದಿಂದ ತೆಗೆದು ಹಾಕುವುದೂ ಇದೆ.

### ವೈದ್ಯರ ವಿದ್ಯಮಾನ

ಕಲ್ಲಿದ್ದಲಿ ಗಣಿಯಂತೆ ಔಷಧೋಪಚಾರವೂ ಇಂಗ್ಲೆಂಡಿನಲ್ಲಿಂದು ರಾಷ್ಟ್ರೀಕೃತವಾಗಿದೆ. ಸಾಮ್ಯವಾದದ ಶ್ವೇತಚ್ಛತ್ರದ ಕೆಳಗೆ ವೈದ್ಯರಾಜರೀಗ ವಿಚಿತ್ರಾನುಭವಗಳನ್ನು ಹೊಂದುತ್ತಿದ್ದಾರೆ. ಜನತೆ ಅದರಿಂದ ಸಂತುಷ್ಟವಾಗಿದೆ, ಬಿಟ್ಟಿ ಸೌಕರ್ಯವನ್ನು ಬಹಳ ಮೆಚ್ಚಿಕೊಂಡಿದೆ. ಆದರೆ ವೈದ್ಯರಲ್ಲಿ ಮಾತ್ರ ಅಭಿಪ್ರಾಯಭೇದವುಂಟಾಗಿದೆ. ಹಳ್ಳಿಯ ವೈದ್ಯ ಒಬ್ಬ ಹಿರಿಯಣ್ಣ. ಅವನಿಗೆ ಶ್ರೀಮಂತ ರೋಗಿಗಳ ಸಂಪರ್ಕವಿದ್ದಕಾರಣ ವರ್ಷಕ್ಕೆ ೧೩೦೦೦ ಡಾಲರುಗಳಷ್ಟು ಸಂಪಾದನೆಯಾಗುತ್ತಿತ್ತು. ಈಗ ಅವನು ೧೨೦೦ ರೋಗಿಗಳಿಗೆ ಬಿಟ್ಟಿ ಚಿಕಿತ್ಸೆ ನಡೆಸಬೇಕು. ಒಬ್ಬೊಬ್ಬ ರೋಗಿಗೆ ೩! ಡಾಲರಿನಂತೆ ಸರಕಾರ ಅವನಿಗೆ ವರ್ಷಕ್ಕೆ ಸುಮಾರು ೪೦೦೦ ಡಾಲರುಗಳನ್ನು ಕೊಡುತ್ತದೆ. ಅದರಿಂದ ಅವನ ಆದಾಯವೀಗ ಕಡಿಮೆಯಾಗಿದೆ. ಅವನಿಗೀಗ ಕಷ್ಟಪಟ್ಟು ದುಡಿಯುವ ಕಾಲ ಒದಗಿದೆ. ಆದಕಾರಣ ವೈದ್ಯಚಿಕಿತ್ಸೆಯನ್ನು ಸಾಮ್ಯವಾದಕ್ಕೊಳಪಡಿಸಿದ್ದು ಅವನಿಗೆ ಅಷ್ಟೇನೂ ರುಚಿಸಿಲ್ಲ. ಆದರೆ ಅದೇ ನಗರಸ್ಥ ವೈದ್ಯನಿಗಾದರೆ ಅದರಿಂದ ಬಹಳ ತೃಪ್ತಿಯಾಗಿದೆ. ಅವನು ಔದ್ಯಮಿಕ ನಗರದ ಜನಬಾಹುಳ್ಯವುಳ್ಳ ಬಡ ಭಾಗದಲ್ಲಿ ವಾಸಿಸುತ್ತಿದ್ದಾನೆಂದು ಕೊಳ್ಳೋಣ. ಮೊದಲು ಅಂಥ ಸ್ಥಳದಲ್ಲಿ ಎಷ್ಟೋ ವೇಳೆ ರೋಗಿಗಳು ಅವನಿಗೆ ಬರಬೇಕಾದ ಹಣವನ್ನು ತಿಂದುಹಾಕುತ್ತಿದ್ದರು. ಸಿಕ್ಕಿದ್ದಷ್ಟೇ ಮಕ್ಕಳ ಪುಣ್ಯವೆಂದು ಅವನು ಆಗ ವಸೂಲಾದಷ್ಟರಿಂದ ತೃಪ್ತನಾಗಿರಬೇಕಾಗಿತ್ತು. ಈಗಾದರೆ ಹಾಗಿಲ್ಲ; ೪೦೦೦ ರೋಗಿಗಳಿಗೆ ಬಿಟ್ಟಿ ಚಿಕಿತ್ಸೆ ನಡೆಸುವುದರಿಂದ ಅವನಿಗೆ ಸರಕಾರದಿಂದ ವರ್ಷಕ್ಕೆ ಸುಮಾರು ೧೩೦೦೦ ಡಾಲರುಗಳು ಲಭಿಸುತ್ತವೆ, ಅಂದರೆ ಮೊದಲಿನ ಆದಾಯಕ್ಕಿಂತ ನೂರಕ್ಕೆ ೪೦ ರಷ್ಟು ಹೆಚ್ಚು. ಆದಕಾರಣ ಅವನು ರಾಷ್ಟ್ರೀಕರಣದ ಪುರಸ್ಕರ್ತನಾಗಿದ್ದಾನೆ.

ದಂತವೈದ್ಯರಲ್ಲಿ ಬಹುಸಂಖ್ಯರು ರಾಷ್ಟ್ರೀಕರಣವನ್ನು ಮೆಚ್ಚಿಕೊಂಡಿರುವುದು ನಿಜ; ಆದರೆ ಎಲ್ಲಾದರೂ ರಶಿಯದಲ್ಲಿರುವಂತೆ ಸಂಪೂರ್ಣವಾಗಿ ಕಡೆಯತನಕ ತಾವು ಸಂಬಳದಾಳುಗಳಾಗೆಯೋ ಉಳಿಯುವ ಪ್ರಸಂಗ ಉಂಟಾದೀತೋ ಏನೋ ಎಂಬ ಭಯ ಮಾತ್ರ ಅವರ ಬೆನ್ನು ಬಿಟ್ಟಿಲ್ಲ. ಉಕ್ಕಿನ ಉದ್ಯಮಿಗಳು ೧೯೫೧ ರಲ್ಲಿ ತಮ್ಮ ಉದ್ಯಮವು ರಾಷ್ಟ್ರೀಕೃತವಾಗುವುದೆಂಬುದನ್ನು ತಿಳಿದಿದ್ದು ದೂರಗಾಮಿಯಾದ, ಚಿರಪರಿಣಾಮಿಯಾದ ಯಾವ ಯೋಜನೆಯನ್ನು ಮಾಡಲೂ ಉತ್ಸಾಹಿಸುತ್ತಿಲ್ಲ. ಆದರೂ ಉತ್ಪಾದನೆಯನ್ನು ಹೆಚ್ಚಿಸದೆ ಉಳಿಯುವುದು ತಮ್ಮ ಸ್ವಾತಂತ್ರ್ಯಕ್ಕೆ ಆಗಲೇ ಎಳ್ಳುನೀರು ಬಿಟ್ಟಂತಾಗುವುದೆಂಬುದನ್ನು ಅರಿತ ಅವರು ಉದ್ಯಮವನ್ನು ಅಭಿವೃದ್ಧಿಗೊಳಿಸುವುದರಲ್ಲಿ ಹಿಂದೆಗೆಯುತ್ತಿಲ್ಲ. ರಾಸಾಯನಿಕ ಉದ್ಯಮಿಗಳು ಈಗಾಗಲೆ ಮೌಲಿಕ ಯಂತ್ರಾಭಿವೃದ್ಧಿಯಲ್ಲಿ ಯಶಸ್ವಿಯಾಗಿ ಮುನ್ನಡೆಯುತ್ತಿರುವುದರಿಂದ ರಾಷ್ಟ್ರೀಕರಣದ ಭೀತಿಗೆ ಅವಷ್ಟು ತುತ್ತಾಗಿಲ್ಲ. ಕೇಂದ್ರ ಬ್ಯಾಂಕೊಂದೇ ಸದ್ಯಃ ರಾಷ್ಟ್ರೀಕೃತವಾದುದರಿಂದ ಖಾಸಗಿ ಬ್ಯಾಂಕಿನ ಒಡೆಯರಿಗೆ ಸಾಮ್ಯವಾದದ ಬಿಸಿ ಇನ್ನೂ ಹತ್ತಿಲ್ಲ.

### ಸಾವಕಾರಿಕೆಗೆ ಪೆಟ್ಟು

ಸಾವಕಾರರಾಗಿದ್ದವರಿಗಿಂದು ದೊಡ್ಡ ದೊಡ್ಡ ಸೌಧಗಳನ್ನು ಕಟ್ಟಲು ಧನ ಸಂಪಾದನೆಯಾಗುವುದು ತಪ್ಪಿಹೋಯಿತು, ಆಗಲೇ ಕಟ್ಟಿದ ಸೌಧಗಳು ಮತ್ತು ಕೊಂಡ ಭೂಮಿಗಳು ಮಾತ್ರ ಹೇಗಿದ್ದವೋ ಹಾಗೇ ಉಳಿದಿವೆ. ಆಗರ್ಭ ಶ್ರೀಮಂತರು ಸ್ವತಂತ್ರ ಉದ್ಯಮಕ್ಕೆ ಬ್ರಿಟನ್ನಿನಲ್ಲಿ ಇನ್ನು ಅವಕಾಶವಿಲ್ಲೆಂದು ತಮ್ಮ ಮಕ್ಕಳನ್ನು ಪರದೇಶಗಳಿಗೆ ಕಳಿಸಲು ಪ್ರಾರಂಭಿಸಿದ್ದಾರೆ. ಆದರೆ ಸಾಮಾನ್ಯ ಬ್ರಿಟಿಶ್ ಉದ್ದಿಮೆದಾರರು ದೇಶಪ್ರೇಮಭರರಾಗಿ ಹೆಚ್ಚು ಲಾಭ ಸಿಗುವಂತಿದ್ದರೂ ಪರದೇಶಗಳಿಗೆ ಹೋಗದೆ ರಾಷ್ಟ್ರೀಕೃತ ಉದ್ಯಮಗಳಲ್ಲೇ ಸರಕಾರದ ಕೈಕೆಳಗೆ ದುಡಿದು ಬ್ರಿಟಿಶ್ ತಯಾರಿಕೆಯ ಸಾಮಾನುಗಳನ್ನು ಉತ್ಪಾದಿಸುವುದೇ ಒಂದು ಹೆಮ್ಮೆಯೆಂದು ತಿಳಿದಿದ್ದಾರೆ. ಇದೊಂದು ಶುಭೋದಯದ ಲಕ್ಷಣವೇ ಸೈ.

ಉದ್ಯಮಿವರ್ಗದಲ್ಲಿ ಅತೃಪ್ತಿಯನ್ನು ಹತ್ತಿಕ್ಕಿಕೊಂಡು ಸಮಾಧಾನ ತಾಳುವ ಒಂದು ಅನುಕೂಲ ಪ್ರವೃತ್ತಿಯುಂಟಾಗಿರುವುದು ಎಲ್ಲೆಲ್ಲೂ ಕಂಡು ಬರುತ್ತದೆ. ಒಂದೆಡೆ ಖಾಸಗಿ ಉದ್ಯಮಿಗಳು ಉತ್ಪಾದನೆಯ ಪರಿಮಾಣ ಪ್ರಕಾರಗಳನ್ನು ಉತ್ಸಾಹದಿಂದ ಸುಧಾರಿಸಲು ಪ್ರಯತ್ನಿಸಿ ತನ್ಮೂಲಕ ಸಾಮ್ಯವಾದದ ಹಸ್ತಕ್ಷೇಪವನ್ನು ಆದಷ್ಟು ದೂರತಳ್ಳುವುದೂ ಮತ್ತೊಂದೆಡೆ ರಾಷ್ಟ್ರೀಕರಣವಾದೆಡೆ ದೊರಿಕೊಳ್ಳುವ ಪಾಲಿಗೆ ಬಂದದ್ದು ಪಂಚಾಮೃತವೆಂದು ತಿಳಿದು ಸಹಕರಿಸುವುದೂ ರೂಢಿಗೆ ಬಂದಿದೆ. ಜನಹಿತಕ್ಕಾಗಿ ಮಾಡುವ ಉದ್ಯಮಿಗಳ ಈ ತ್ಯಾಗ ಸ್ತುತ್ಯರ್ಹವೆಂದು ಯಾರು ಹೇಳರಿದ್ದಾರ?

ಶ್ರೀಯುತ ಮತ್ತು ಶ್ರೀಯುತೆ ಬೇವನರು ಇತ್ತೀಚೆಗೆ ಲಂಡನ್ನಿನ ಭಾರತ ಭವನದಲ್ಲಿ ಸ್ವಾಗತಿಸಲ್ಪಟ್ಟಾಗ ತೆಗೆದ ಚಿತ್ರ. ಎಡದಿಂದ ಬಲಕ್ಕೆ- ಡಾ. ಹಂಡೂ, ಬೇವನ್ ದಂಪತಿಗಳು ಮತ್ತು ಶ್ರೀ ಕೃಷ್ಣ ಮೆನನ್ನರು.

ಸಂಪುಟ ೨೧ | ಕರ್ಮವೀರ | ಸೋಮವಾರ
ಸಂಚಿಕೆ ೨ | | ಚೈತ್ರ ಬಹುಳ ೬
ತಾರೀಖು [illegible]

## ಮುಖಪತ್ರದಲ್ಲಿ

ಮದ್ರಾಸಿನ ಹೊಸ ಮುಖ್ಯಮಂತ್ರಿಗಳಾಗಿ ಆರಿಸಲ್ಪಟ್ಟ ಶ್ರೀ. ಕುಮಾರಸ್ವಾಮಿ ರಾಜಾ ಅವರು ಅಷ್ಟು ಹೆಸರಾದ ಕಾಂಗ್ರೆಸಿಗರಲ್ಲದಿದ್ದರೂ ಅನೇಕ ವರ್ಷಗಳಿಂದ ಆ ಸಂಸ್ಥೆಯಲ್ಲಿದ್ದವರು. ೧೯೩೫ ರಿಂದ ಅ. ಭಾ. ಕಾಂಗ್ರೆಸ್ ಸದಸ್ಯರಾಗಿದ್ದ ಇವರು ತಮ್ಮ ೫೦ ವಯಸ್ಸಿಗೆ ಸ್ವಲ್ಪ ಯುವಕರಾಗಿಯೆ ಕಾಣುತ್ತಾರೆ. ರಾಜಾಜಿಯ ಮಂತ್ರಿ ಮಂಡಲದಲ್ಲಿ ಉಪ ಮಂತ್ರಿಗಳಾಗಿ ಕೆಲಸ ಮಾಡಿದ ಇವರ ಮಂತ್ರಿ ಮಂಡಲಕ್ಕೆ ತಮಿಳನಾಡು ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಕಾಮರಾಜ ನಾಡಾರರೇ ಬೆನ್ನೆಲುಬೆನ್ನಬಹುದು. ಅವರು ಆರಿಸಿಕೊಂಡ ಮಂತ್ರಿಗಳಲ್ಲಿ ಅಧಿಕಾಂಶ ಜನರು ಶ್ರೀ ಓಮಂಡೂರ ಮಂತ್ರಿ ಮಂಡಲದವರೇ ಆಗಿರುವರಲ್ಲದೆ, ಶ್ರೀ ರಾಜಾ ಅವರು ಓಮಂಡೂರರ ಉತ್ತಮ ಆದರ್ಶವನ್ನು ಶ್ಲಾಘಿಸಿ ಮಾತಾಡಿರುವರೆಂದ ಮೇಲೆ ಅವರ ಧೋರಣೆಯೇನೂ ಹೊಸ ಹಾದಿ ತುಳಿಯಲಾರದು. ಅವರೇ ಒಪ್ಪಿಕೊಂಡಂತೆ "ರಾಜಾಜಿಯಲ್ಲಿದ್ದ ಜ್ಞಾನವಾಗಲಿ ಪ್ರಕಾಶಂರ ರಾಜಕೀಯ ಚಾಣಾಕ್ಷತನವಾಗಲಿ ಶ್ರೀ ಓಮಂಡೂರರ ಚಾರಿತ್ರಸಂಪತ್ತಿಯಾಗಲಿ ಇಲ್ಲದಿರುವ" ಅವರು ಈ ಉಚ್ಚಪದಕ್ಕೆ ಆರಿಸಿ ಬರಲು ಮದ್ರಾಸಿನ ವಿಲಕ್ಷಣ ರಾಜಕೀಯ ಅವಸ್ಥೆಯೇ ಕಾರಣವೆಂದು ಹೇಳಬಹುದು. "ಪ್ರತಿಯೊಬ್ಬನಿಗೂ ಹೊಟ್ಟೆತುಂಬ ಊಟ ದೊರಕುವಂತೆ ನೋಡುವ ಪ್ರಯತ್ನ ಮಾಡುವದೇ" ತಮ್ಮ ಮುಖ್ಯ ಉದ್ದೇಶವೆಂದು ಅವರು ಸಾರಿದ್ದಾರೆ. ಅವರಂದಂತೆ ಇದೇ ಮದ್ರಾಸ್ ಪ್ರಾಂತದ ಮುಖ್ಯ ಸಮಸ್ಯೆ ನಿಜ. ಆದರೆ ಆಹಾರ ಹೆಚ್ಚು ಬೆಳೆಯುವಲ್ಲಿ ಹಿಂದಾಗಿದ್ದರೂ ರಾಜಕೀಯ ಬಿಕ್ಕಟ್ಟುಗಳನ್ನು ಬೆಳೆಯುವಲ್ಲಿ ಮುಂದಾದ ಈ ಪ್ರಾಂತದಲ್ಲಿ ಹೊಸ ಮುಖ್ಯ ಮಂತ್ರಿಗಳ ಹಾಸಿಗೆ ಹಂಸತೂಲಿಕಾತಲ್ಪವಾದೀತೆಂದು ಭಾವಿಸಲೆಡೆಯಿಲ್ಲ. ಪ್ರಕಾಶಂ ಮಂತ್ರಿಮಂಡಲಕ್ಕೆ ಒಂದು ವರ್ಷ, ಓಮಂಡೂರರದಕ್ಕೆ ಎರಡು ವರ್ಷ, ಕೆಲವೇ ಮತಗಳ ಅಂತರದಿಂದ ಆರಿಸಿ ಬಂದ ಶ್ರೀ ರಾಜಾ ಅವರ ಮಂತ್ರಿಮಂಡಲಕ್ಕೆ - ಎಷ್ಟು ಆಯುಷ್ಯ? ಎಂಬ ಪ್ರಶ್ನೆ ಸಹಜವಾಗಿಯೆ ಎಲ್ಲೆಡೆ ಕೇಳಿ ಬರುತಿದೆ. ಆದರೆ ಪ್ರಕಾಶಂ ಮತ್ತು ಸುಬ್ರಾಯನ್ ಪಕ್ಷದ ಕೆಲವರನ್ನು ಸೇರಿಸಿಕೊಳ್ಳುವದಿರುವರೆಂಬುದೊಂದು ಸಮಾಧಾನ.

## ಕರ್ಮವೀರ

**ಪ್ರತಿ ಸೋಮವಾರ ಹುಬ್ಬಳ್ಳಿಯಿಂದ ಹೊರಡುವ ವಾರಪತ್ರಿಕೆ**

ಸಂಸ್ಥಾಪಕರು :
**ಶ್ರೀ ರಂ. ರಾ. ದಿವಾಕರ**
ಸಂಪಾದಕರು :
**ಶ್ರೀ ಹ. ರಾ. ಪುರೋಹಿತ**

**ಹೊಸ ವರ್ಗಣಿ ವಿವರಗಳು :**

| | |
|---|---|
| ೧ ವರ್ಷಕ್ಕೆ | ರೂ. [illegible]—೧೨—೦ |
| ೬ ತಿಂಗಳಿಗೆ | ರೂ. [illegible] |
| ೩ ,, | ರೂ. [illegible] |

ಬಿಡಿ ಸಂಚಿಕೆ : ೩ ಆಣೆ

ವ್ಹಿ. ಪಿ. ದ್ವಾರಾ ಕಳಿಸಿದರೆ [illegible] ಹೆಚ್ಚು ಬೀಳುವದು.

ಸೂಚನೆ : ಈವರೆಗೆ ವರ್ಷಕ್ಕೆ ೪ ವಾರ ರಜೆ ತೆಗೆದುಕೊಳ್ಳುವ ಪರಿಪಾಠವಿತ್ತು. ಓದುಗರಿಗೆ ಇದರಿಂದ ತೊಂದರೆಯಾಗುವದನ್ನರಿತು ಇನ್ನು ಮುಂದೆ ರಜೆಗಳನ್ನು ರದ್ದುಗೊಳಿಸಿ ವರ್ಷದಲ್ಲಿ ೫೨ ಸಂಚಿಕೆಗಳನ್ನು ತೆಗೆಯಲಾಗುವದು. ವಿಶೇಷ ಸಂಚಿಕೆಗಳನ್ನು ಹೊರಡಿಸಿದರೆ ಅದರ ಬಗ್ಗೆ ಪ್ರತ್ಯೇಕ ಬೆಲೆಯನ್ನು ಕೊಡಬೇಕಾಗುವದು.

ಚಂದಾದಾರರು : ತಮ್ಮ ವರ್ಗಣಿ, ಸಂಚಿಕೆಗಳ ತಲುಪುವಿಕೆಯ ಸಂಬಂಧದ ದೂರು ಮೊದಲಾದವುಗಳ ಬಗ್ಗೆ ಪತ್ರ ವ್ಯವಹಾರವನ್ನು ಮಾಡುವಾಗ ವಿಳಾಸದ ಚೀಟಿಯ ಮೇಲಿರುವ ಚಂದಾ ನಂಬರುಗಳನ್ನು ಉಲ್ಲೇಖಿಸಬೇಕು. ಇಲ್ಲದಿದ್ದರೆ ಸಾವಿರಗಟ್ಟಲೆ ಚಂದಾದಾರರಲ್ಲಿ ನಿಮ್ಮ ಹೆಸರನ್ನು ಕಂಡು ಹಿಡಿಯುವದು ಸಾಧ್ಯವಾಗದು.

—ವ್ಯವಸ್ಥಾಪಕ,
"ಕರ್ಮವೀರ" ಹುಬ್ಬಳ್ಳಿ.

# ಸಂಸ್ಥಾನಗಳ ಆಡಳಿತೆ

ಹಿಂದುಸ್ತಾನದ ಉಪಮುಖ್ಯಮಂತ್ರಿ ಸರದಾರ ವಲ್ಲಭಭಾಯರ ಮುಂಧೋರಣದ ಫಲವಾಗಿ ದೇಶದಲ್ಲಿಯ ಸಂಸ್ಥಾನಗಳು ಬಹುಸಂಖ್ಯೆಯಲ್ಲಿ ಸಮೀಕರಣ ಹೊಂದಿವೆ. ಇನ್ನುಳಿದ ಸಂಸ್ಥಾನಗಳಲ್ಲಿ ಕೆಲವು ಒಕ್ಕೂಟಗಳನ್ನು ರಚಿಸಿಕೊಂಡಿದ್ದರೆ, ಕೆಲವು ಹಿಂದುಸ್ತಾನ ಸರಕಾರಕ್ಕೆ ಮಹತ್ವದ ಮೂರು ವಿಷಯಗಳಲ್ಲಿ ಅಧೀನವಾಗಿದ್ದುಕೊಂಡು ಅಂತಃ ಕಾರಭಾರವನ್ನೆಲ್ಲ ತಾವೇ ನಡೆಸುವ ಹೊಣೆಯನ್ನು ಹೊತ್ತುಕೊಂಡಿವೆ. ಇದರಿಂದ ಒಕ್ಕೂಟ ಹಿಂದುಸ್ತಾನ ಮತ್ತು ಸಂಸ್ಥಾನ ಹಿಂದುಸ್ತಾನಗಳಲ್ಲಿ ಇದ್ದ ಭೇದಭಾವವು ಕೆಲ ಮಟ್ಟಿಗೆ ಕಡಿಮೆಯಾಗಿದ್ದರೂ ಸಂಸ್ಥಾನ ಭಾಗಗಳ ಆಡಳಿತೆಯೆಂತಿರಬೇಕು, ರಾಜ್ಯಘಟನೆ ಯಾವ ಮಾದರಿಯದಾಗಿರಬೇಕು ಎಂಬ ಪ್ರಶ್ನೆ ಇನ್ನೂ ನಿರ್ಣಯವಾಗದೆ ಉಳಿದಿದ್ದಿತು. ಕಳೆದವಾರ ಹೊಸದಿಲ್ಲಿಯಲ್ಲಿ ರಾಜಪ್ರಮುಖರ ಸಮ್ಮೇಲನ ಸೇರಿ ಸಂಸ್ಥಾನಗಳ ಒಕ್ಕೂಟ ಸ್ಥಾಪನೆಯ ಪತ್ರಕ್ಕೆ ಮಹತ್ವದ ತಿದ್ದುಪಡಿಯನ್ನು ಮಾಡಿಕೊಂಡದ್ದಲ್ಲದೆ ಸಂಸ್ಥಾನಗಳ ಆಡಳಿತೆಯನ್ನೆಲ್ಲ ಕೇಂದ್ರ ಸರಕಾರದ ಸೂಚನೆಯಂತೆ ನಡೆಸಬೇಕೆಂದು ಗೊತ್ತುಮಾಡಲಾಗಿದೆ.

ಈ ಮೊದಲು ಸಂಸ್ಥಾನಗಳ ಒಕ್ಕೂಟ ರಚನೆಯ ಕಾಲಕ್ಕೆ ಹಿಂದುಸ್ತಾನ ಸರಕಾರದ ಕೂಡ ಕೆಲವೊಂದು ಕರಾರುಗಳನ್ನು ಮಾಡಿಕೊಂಡದ್ದಾಗಿದೆ. ಘಟನಾಸಮಿತಿಯು ಹಿಂದುಸ್ತಾನದ ರಾಜ್ಯಘಟನೆಯನ್ನು ಸಿದ್ಧಪಡಿಸುವಂತೆ ಈ ಒಕ್ಕೂಟಗಳ ಘಟನೆಯನ್ನೂ ಸಿದ್ಧಪಡಿಸಬೇಕೆಂದು ಇದೀಗ ಗೊತ್ತಾಗಿದೆ. ಪ್ರಾಂತಗಳ ಘಟನೆಯ ಮಾದರಿಯ ಮೇಲೆ ಸಂಸ್ಥಾನ ಖಾತೆಯ ಸಲಹೆಯಂತೆ ಹಿಂದುಸ್ತಾನದ ಘಟನಾಸಮಿತಿಯೆ ಈ ಸಂಸ್ಥಾನ ಒಕ್ಕೂಟಗಳ ಘಟನೆಯನ್ನು ಸಿದ್ಧಮಾಡುವದು. ಇದರಿಂದ ಸಂಸ್ಥಾನ ಮತ್ತು ಪ್ರಾಂತಗಳಲ್ಲಿಯ ಭೇದಭಾವವು ಮಾಯವಾಗುವದೆಂದು ನಿರೀಕ್ಷಿಸಲಾಗಿದೆ. ಈ ರೀತಿ ಹಿಂದುಸ್ತಾನದ ಘಟನಾಸಮಿತಿಯು ಸಂಸ್ಥಾನಗಳ ರಾಜ್ಯಘಟನೆಯನ್ನು ಸಿದ್ಧಪಡಿಸಿದ ಬಳಿಕ ಅದನ್ನು ಸಂಸ್ಥಾನ ಘಟನಾ ಸಮಿತಿಯು ಸ್ವೀಕರಿಸಿದ ನಂತರ ಅದು ಜಾರಿಯಲ್ಲಿ ಬರಬೇಕೆಂದು ಒಂದು ಕಲವಿನನ್ವಯ ಗೊತ್ತುಮಾಡಲಾಗಿದೆ. ಹೀಗೆ ಘಟನೆಯು ಜಾರಿಯಲ್ಲಿ ಬಂದ ನಂತರ ಪ್ರಾಂತ ಮತ್ತು ಸಂಸ್ಥಾನಗಳಲ್ಲಿ ಭೇದವಿಲ್ಲದೆ ಆಡಳಿತೆ ನಡೆಯಲು ಅನುಕೂಲವಾಗುವದು.

ಸಂಸ್ಥಾನಿಕರು ಹಿಂದುಸ್ತಾನ ಘಟನಾ ಸಮಿತಿಯು ಸಿದ್ಧಪಡಿಸಿದ ಘಟನೆಯಂತೆ ಆಡಳಿತೆಯನ್ನು ನಡೆಸಲು ಒಪ್ಪಿಕೊಂಡಿದ್ದು ಮಹತ್ವದ ಕ್ರಾಂತಿಯೆಂದೇ ಹೇಳಬಹುದು. ಸಣ್ಣ ಸಣ್ಣ ಸಂಸ್ಥಾನಿಕರು ಸಮೀಕರಣ ತತ್ವಕ್ಕೆ ಒಪ್ಪಿಕೊಂಡಷ್ಟೆ ಮಹತ್ವದ್ದಾಗಿದೆ ಈ ತಿದ್ದುಪಡಿ ಎಂದು ಹೇಳಬಹುದು. ಇದರಿಂದ ಭಾವೀ ಅನರ್ಥಗಳು ತಪ್ಪಬಹುದು. ಕಾಯದೆಯಲ್ಲಿ ಇಲ್ಲವೆ ಘಟನೆಯಲ್ಲಿ ದೋಷ ಉಳಿದರೆ ಕಾಲ ಕ್ರಮೇಣ ಸಂಸ್ಥಾನಿಕರು ಹಿಂದುಸ್ತಾನದ ಹಿತಶತ್ರುಗಳ ಕುತಂತ್ರಗಳಿಗೆ ಬಲಿಬಿದ್ದು, ಅದರ ದುರುಪಯೋಗ ಮಾಡಿಕೊಳ್ಳಲು ಪ್ರವೃತ್ತರಾಗಬಹುದಾಗಿತ್ತು. ಆ ಬಗೆಯ ಪ್ರವೃತ್ತಿಗೆ ಅವಕಾಶ ಕೊಡಬಾರದೆಂದು ಮೊದಲೆ ಜಾಗೃತರಾಗಿ ಘಟನೆಯಲ್ಲಿಯೆ ಅಂಕುಶ ಏರ್ಪಡು ಮಾಡುವದು ಜಾಣತನದ ಮಾತಾಗಿದೆ.

ಹಿಂದುಸ್ತಾನದ ಆಡಳಿತೆಯು ಸರಿಯಾಗಿ ಸಾಗಿ ಜಗತ್ತಿನಲ್ಲಿ ಅದು ತಕ್ಕುದಾದ ಗೌರವದ ಸ್ಥಾನ ಮಾನಗಳನ್ನು ಪಡೆಯಬೇಕಾದರೆ ಸ್ವಾತಂತ್ರ್ಯದ ಸಂಪೂರ್ಣ ಪ್ರಯೋಜನವನ್ನು ನಾವು ಪಡೆಯಬೇಕಾದರೆ ಸಂಸ್ಥಾನ ಮೊದಲಾದ ಭೇದಗಳಿಲ್ಲದೆ ಇಡೀ ರಾಷ್ಟ್ರದ ಆಡಳಿತೆಯು ಒಂದೇ ಬಗೆಯ ರಾಜ್ಯಘಟನೆಯನ್ವಯ ನಡೆಯತಕ್ಕದ್ದು. ನೂರಾರು ವರುಷಗಳಿಂದ ಅಧಿಕಾರವನ್ನು ನಡೆಸುತ್ತ ಬಂದ ಪ್ರಮುಖ ಸಂಸ್ಥಾನಿಕರು ಒಮ್ಮೆಲೆ ಅಧಿಕಾರತ್ಯಾಗಕ್ಕೆ ಸಿದ್ಧರಾಗಲಾರರೆಂದೇ ಅವರ ಅಧಿಕಾರವನ್ನುಳಿಸಿ ಹಿಂದುಸ್ತಾನ ಸರಕಾರದ ನೇತೃತ್ವದಲ್ಲಿಯೆ ಅವರ ಆಡಳಿತೆ ಸಾಗುವಂತೆ ಮಾಡುವದು ಕ್ರಮಪ್ರಾಪ್ತವಾಗಿದೆ. ಇದನ್ನರಿತೆ ಸಂಸ್ಥಾನ ಖಾತೆಯವರು ದೊಡ್ಡ ದೊಡ್ಡ ಸಂಸ್ಥಾನಗಳ ಒಕ್ಕೂಟವನ್ನು ರಚಿಸಿ, ಒಂದೆರಡು ಸಂಸ್ಥಾನಗಳನ್ನು ಹಾಗೆಯೆ ಉಳಿಸಿದ್ದಾರೆ. ಆದರೆ ಮೇಲೆ ಉಲ್ಲೇಖಿಸಿದ ಕರಾರಪತ್ರದ ತಿದ್ದುಪಡಿಯಿಂದ ಇಡೀ ಹಿಂದುಸ್ತಾನದ ಆಡಳಿತೆ ಒಂದೇ ಬಗೆ ರಾಜ್ಯಘಟನೆಯನ್ವಯ ಸಾಗುವದಾದ್ದರಿಂದ ಯಾವದೇ ಬಗೆಯ ಅಡೆತಡೆಗಳಿಲ್ಲದೆ ರಾಷ್ಟ್ರದ ಸಾರ್ವಾಂಗೀಣ ಪ್ರಗತಿಯಾಗುವಲ್ಲಿ ಸಂದೇಹವಿಲ್ಲ.

## ರಾಜೇಂದ್ರ ಬಾಬುಗಳ ಸಂಚಾರ

ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿ ಸಮಿತಿಯ ಅಧ್ಯಕ್ಷರಾದ ರಾಜೇಂದ್ರ ಬಾಬುಗಳು ಇದೇ ತಿಂಗಳು ೨೪ ನೇ ತಾರೀಖಿನಿಂದ ೨೮ ರ ವರೆಗೆ ಕರ್ನಾಟಕದಲ್ಲಿ ಸಂಚರಿಸಲಿರುವರು. ಅವರ ಸಂಚಾರ ಕಾರ್ಯಕ್ರಮದ ವಿವರಗಳನ್ನು ಬೇರೆ ಕಡೆ ಕೊಟ್ಟಿದ್ದೇವೆ. ಇದೇ ತಿಂಗಳು ಕೊನೆಗೆ ಗಾಂಧಿ ನಿಧಿ ಸಂಗ್ರಹ ಕಾರ್ಯವನ್ನು ಮುಕ್ತಾಯಗೊಳಿಸುವದಿದ್ದುದರಿಂದ ಕರ್ನಾಟಕದಲ್ಲಿಯ ಮಹಾಜನರು ಉದಾರ ಹಸ್ತದಿಂದ ಗಾಂಧಿ ನಿಧಿಗೆ ಕಾಣಿಕೆ ಸಲ್ಲಿಸುವದು ಅವಶ್ಯವಾಗಿದೆ. ರಾಜೇಂದ್ರ ಬಾಬುಗಳ ಸ್ವಾಗತಕ್ಕಾಗಿ ಮತ್ತು ಗಾಂಧಿ ನಿಧಿ ಸಂಗ್ರಹಿಸುವದಕ್ಕಾಗಿ ಅಲ್ಲಲ್ಲಿ ಸಮಿತಿಗಳು ರಚಿತವಾಗಿವೆ. ಸಾರ್ವಜನಿಕರೆಲ್ಲ ಈ ಸಮಿತಿಗಳೊಡನೆ ಸಹಕರಿಸಿ ಬಾಬುಗಳಿಗೆ ಸಂಭ್ರಮದ ಸ್ವಾಗತವನ್ನು ಮಾಡುವದಲ್ಲದೆ ಗಾಂಧೀ ನಿಧಿಗೆ ಹೆಚ್ಚು ಹಣವನ್ನು ಸಲ್ಲಿಸಬೇಕು. ಗಾಂಧೀ ಪ್ರಾಂತವೆಂದು ಮೊದಲಿನಿಂದಲೂ ಖ್ಯಾತಿ ಪಡೆದ ಕರ್ನಾಟಕವು ಹಿಂದಿನ ಕೀರ್ತಿಗೆ ತಕ್ಕುದಾದ ರೀತಿಯಲ್ಲಿ ಗಾಂಧಿ ನಿಧಿಯನ್ನು ಸಮರ್ಪಿಸಿ ಕೃತಾರ್ಥರಾಗಬೇಕು.

× × ×

ಕಾಶಿಯ ಹಿಂದು ವಿಶ್ವವಿದ್ಯಾನಿಲಯದವರು ತಮ್ಮ ವಿಶ್ವವಿದ್ಯಾಲಯದ ಅಭ್ಯಾಸಕ್ರಮದಲ್ಲಿ ಎರಡು ಮಹತ್ವದ ಬದಲಾವಣೆಯನ್ನು ಮಾಡಬಯಸಿರುವರೆಂದು ತಿಳಿಯುತ್ತದೆ. [illegible] ಸಂಸ್ಕೃತಕ್ಕೆ [illegible] ಅರ್ಧಚಂದ್ರ [illegible] ಇವೇ ಆ ಎರಡು ಮಹತ್ವದ ಬದಲಾವಣೆಗಳಾಗಿವೆ. ಹಿಂದುಗಳ ಧರ್ಮ ಕ್ಷೇತ್ರವಾದ [illegible] ಕಾಶೀ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತಕ್ಕೆ ಅರ್ಧಚಂದ್ರ [illegible] ಆಶ್ಚರ್ಯಕರವಾಗಿದೆ. [illegible] ಸಂಸ್ಕೃತಿಯನ್ನು ತಿಳಿದುಕೊಳ್ಳಲಿಕ್ಕೆ ಅದರ ಅಭ್ಯಾಸವು ಅಗತ್ಯವಾಗಿದೆ. ಪಾರಿಭಾಷಿಕ ಶಬ್ದಗಳಿಗಾಗಿಯೂ ಸಂಸ್ಕೃತದ ಅಭ್ಯಾಸ ಬೇಕು. [illegible] ಬರೆಯಲಾಗಿದೆ. ಹಿಂದೂ ವಿಶ್ವ ವಿದ್ಯಾಲಯ [illegible]

[illegible]

× × ×

[illegible]

× × ×

[illegible]

# ಮುಂಬಯಿ ಪ್ರಾಂತದಲ್ಲಿ ಸರ್ವೋದಯ ಯೋಜನೆ

## ಆಂಧ್ರ ಪ್ರಾಂತ ರಚನೆಯ ಬಗ್ಗೆ ಡಾ. ಪಟ್ಟಾಭಿಯವರ ವಿವರಣೆ

### ಸರ್ವೋದಯ ಯೋಜನೆ

ಮುಂಬಯಿ ಸರಕಾರದವರು ಪ್ರಾಂತದಲ್ಲಿಯ ಹಿಂದುಳಿದ ಮತ್ತು ಗುಡ್ಡಗಾಡು ಜನರ ಸರ್ವೋದಯಕ್ಕಾಗಿ ಒಂದು ಕೋಟಿ ರೂಪಾಯಿಗಳ ನಾಲ್ಕು ವರುಷದ ಯೋಜನೆಯೊಂದನ್ನು ಸಿದ್ಧಪಡಿಸಿ ಕಾರ್ಯರೂಪಕ್ಕೆ ತರಲಿಚ್ಛಿಸಿದ್ದಾರೆ. ಮುಖ್ಯಮಂತ್ರಿ ಮುರಾರಜಿ ದೇಸಾಯಿ ಮತ್ತು ವೈಕುಂಠಲಾಲ ಮೆಹತಾ ಇವರ ಹಾಗು ಮೂವರು ಸರಕಾರೇತರ ಸದಸ್ಯರ ಒಂದು ಪ್ರಾಂತೀಯ ಸಮಿತಿಯ ನೇತೃತ್ವದಲ್ಲಿ ಈ ಕಾರ್ಯ ನಡೆಯುವದು. ಸಹಕಾರ ಸಂಸ್ಥೆಯ ರಜಿಸ್ಟ್ರಾರರಾದ ಶ್ರೀ ಬಿ. ಪಿ. ಪಟೇಲರು ಈ ಯೋಜನೆಯನ್ನು ಸಿದ್ಧಪಡಿಸಿದ್ದು ಕಂದಾಯ ಖಾತೆಯ ಕಾರ್ಯದರ್ಶಿಗಳಾದ ಶ್ರೀ ಸರದೇಸಾಯರೂ ಇದರಲ್ಲಿ ಭಾಗವಹಿಸುವರು. ಪ್ರತಿಯೊಂದು ಜಿಲ್ಲೆಯಲ್ಲಿ ೩೦-೫೦ ಹಳ್ಳಿಗಳ ಕ್ಷೇತ್ರದಲ್ಲಿ ಹಿಂದುಳಿದ ಮತ್ತು ಗುಡ್ಡಗಾಡು ಜನರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಅಭಿವೃದ್ಧಿಯನ್ನು ಸರ್ವೋದಯ ಯೋಜನೆಗಳನ್ನು ಮಾಡಿ ಪ್ರಾಂತೀಯ ಸಮಿತಿಯ ಒಪ್ಪಿಗೆಯನ್ನು ಪಡೆಯಬೇಕಾಗುವದು. ಸುರತ, ಬೆಳಗಾವಿ, ರತ್ನಾಗಿರಿ, ಪೂರ್ವ ಖಾನದೇಶ ಮತ್ತು ಠಾಣಾ ಈ ಅಯಿದು ಜಿಲ್ಲೆಗಳಲ್ಲಿ ಈಗಾಗಲೆ ಯೋಜನೆ ಪ್ರಾರಂಭವಾಗಿದೆ. ಪೂರ್ವ ಸಿದ್ಧತೆಗಾಗಿ ೩ ರಿಂದ ೩೦ ಸಾವಿರ ರೂಪಾಯಿಗಳನ್ನು ಮಂಜೂರ ಮಾಡಲಾಗಿದೆ. ಸರ್ವೋದಯ ಯೋಜನೆಗಾಗಿ ಕಾರ್ಯಕರ್ತರನ್ನು ತರಬೇತು ಗೊಳಿಸುವದು ಗಾಂಧೀಜಿಯವರು ಹೇಳಿದ ರಚನಾತ್ಮಕ ಕಾರ್ಯಕ್ರಮದ ತತ್ವಗಳ ಮೊದಲಾದವುಗಳ ಜ್ಞಾನ ಮಾಡಿಕೊಡುವದು ಕರ್ತವ್ಯವಾಗಿದೆ. ಸರಕಾರದವರು ಇಟ್ಟುಕೊಂಡ ಈ ಕಾರ್ಯ ಅತ್ಯಂತ ಅವಶ್ಯ ಮತ್ತು ಮಹತ್ವದ್ದಾಗಿದೆ. ಆದರೆ ಧ್ಯೇಯವು ಸಾಧಿಸಬೇಕಾದರೆ ಕಾರ್ಯಕರ್ತರು ಮನಮುಟ್ಟಿ ದುಡಿಯಬೇಕಲ್ಲದೆ ಅಲ್ಲಲ್ಲಿನ ಜನರೂ ಸಕ್ರಿಯ ಸಹಾನುಭೂತಿಯನ್ನು ತೋರಿಸಬೇಕು. ಪ್ರಾಂತದಲ್ಲೆಲ್ಲ ಸರಕಾರ ಮತ್ತು ಗಾಂಧೀಜಿಯ ಸರ್ವೋದಯ ಸಮಾಜದ ಮುಖಾಂತರ ಸರ್ವೋದಯ ಕಾರ್ಯ ನಡೆದದ್ದಾದರೆ ಹಿಂದುಸ್ಥಾನವು ತನ್ನ ಮೊದಲಿನ ಗೌರವದ ಸ್ಥಾನವನ್ನು ಪಡೆದು ಆರ್ಥಿಕ ಸಾಮಾಜಿಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮುಂಬರಿಯುವುದೆಂಬಲ್ಲಿ ಸಂದೇಹವಿಲ್ಲ.

### ಅಂಚೆ ಕಾರ್ಡುಗಳು

ಇದೇ ಎಪ್ರಿಲ ತಿಂಗಳಿಂದ ಅಂಚೆ ಕಾರ್ಡುಗಳ ಬೆಲೆ ಮೂರು ಬಿಲ್ಲಿಯಾಗಿದ್ದು ಆಯಾ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿದ್ದರೂ ಇನ್ನೂ ಅರ್ಧ ಆಣೆಯ ಕಾರ್ಡುಗಳನ್ನು ಹಾಕುವದುಂಟು. ಇಂಥ ಕಾರ್ಡುಗಳನ್ನು ಎಪ್ರಿಲ ಮೂವತ್ತರ ವರೆಗೆ ಮಾತ್ರ 'ನಾಟಪೇಡ' ಎಂದು ಪರಿಗಣಿಸಿ ಆಯಾ ಜನರಿಂದ ಹೆಚ್ಚಿಗೆ ಅರ್ಧ ಆಣೆ ತೆಗೆದುಕೊಂಡು ಮುಟ್ಟಿಸಲಾಗುವದು. ಅನಂತರ ಅವನ್ನು ಮುಟ್ಟಿಸುವ ಹೊಣೆ ಹೊರದೆ, ನೇರವಾಗಿ ಅವನ್ನೆಲ್ಲ, ಡೆಡ್ ಲೆಟರ ಅಫೀಸಿಗೆ ಕಳಿಸಿ ನಾಶಗೊಳಿಸಲಾಗುವದು ಎಂದು ಅಂಚೆ ಮತ್ತು ತಂತಿ ಖಾತೆಯವರು ಪ್ರಸಿದ್ಧಿಸಿದ್ದಾರೆ.

### ಆಂಧ್ರ ಪ್ರಾಂತದ ರಚನೆಯೆಂತು ?

ಆಂಧ್ರ ಪ್ರಾಂತ ರಚನೆಗೆ ಪ್ರಥಮ ಪ್ರಾಶಸ್ತ್ಯ ಕೊಡಲಾಗುವುದೆಂದು ತ್ರಿಮೂರ್ತಿ ವರದಿಯಲ್ಲಿ ಹೇಳಲಾಗಿದೆಯಷ್ಟೇ. ಈ ವಿಷಯವನ್ನು ವಿವರಿಸುತ್ತ ಕಾಂಗ್ರೆಸ ಅಧ್ಯಕ್ಷರೂ ತ್ರಿಮೂರ್ತಿ ಸಮಿತಿಯ ಸದಸ್ಯರೂ ಆಗಿರುವ ಡಾ. ಪಟ್ಟಾಭಿಯವರು ಮುಂಬಯಿಯಲ್ಲಿ ಪತ್ರಿಕಾ ಪರಿಷತ್ತಿನಲ್ಲಿ ಇಂತು ಹೇಳಿದರು. 'ತ್ರಿಮೂರ್ತಿಗಳ ವರದಿಯನ್ನು ಹಿಂದುಸ್ಥಾನ ಘಟನಾಸಮಿತಿಯ ಅಧ್ಯಕ್ಷರಿಗೂ ಹಿಂದುಸ್ಥಾನ ಸರಕಾರಕ್ಕೂ ಕಳಿಸಲಾಗಿದೆ. ಆಂಧ್ರ ಪ್ರಾಂತೀಕರಣದ ಬಗ್ಗೆ ಹಾಕಲಾದ ಕರಾರುಗಳೆಲ್ಲ ಸ್ವೀಕೃತವಾದಲ್ಲಿ ಹಾಗೆ ಸ್ವೀಕೃತವಾಗುವದೆಂದು ನನ್ನ ನಂಬಿಕೆ—ಮತ್ತು ಹಿಂದುಸ್ಥಾನ ಸರಕಾರವೂ ಸಮ್ಮತಿ ಅಭಿಪ್ರಾಯಪಟ್ಟಲ್ಲಿ ಹಿಂದುಸ್ಥಾನ ಸರಕಾರವು ಸರ್ವಸಮ್ಮತ ಗಡಿಗಳನ್ನು ನಿರ್ಣಯಿಸಲು ಆಂಧ್ರ ತಮಿಳನಾಡು ಮತ್ತು ಕರ್ನಾಟಕ ಪ್ರತಿನಿಧಿಗಳ ಸಭೆಯನ್ನು ಕರೆಯುವದು. ಮದರಾಸ ಮಂತ್ರಿಮಂಡಳವೂ ಈ ಬಗ್ಗೆ ಒಂದು ಗೊತ್ತುವಳಿ ಸ್ವೀಕರಿಸಬೇಕಾಗುವದು. ಅನಂತರ ಕೇಂದ್ರ ಸರಕಾರದ ಪುರಸ್ಕಾರಕ್ಕನುಸಾರವಾಗಿ ಗವರ್ನರ ಜನರಲ್‌ರು ಆಂಧ್ರ ಪ್ರದೇಶವು ಪ್ರತ್ಯೇಕ ಪ್ರಾಂತವೆಂದು ಸಾರುವರು. ಆಂಧ್ರ ಶಾಸನ ಸಭಾ ಸದಸ್ಯರು ಸರ್ವಾನುಮತದಿಂದ ಇದನ್ನು ಸ್ವೀಕರಿಸಬೇಕೋ ಇಲ್ಲವೆ ಬಹುಮತದಿಂದ ಸ್ವೀಕರಿಸಿದರೆ ಸಾಕೊ ಎಂಬದನ್ನು ಕೇಂದ್ರ ಸರಕಾರವು ಗೊತ್ತುಪಡಿಸಬೇಕಾಗುವದು' ಎಂದು ಮುಂತಾಗಿ ಡಾ. ಪಟ್ಟಾಭಿಯವರು ಸ್ಪಷ್ಟೀಕರಿಸಿದರು.

### ಹಿರಿಯೋಲಗ ಮುಂಬರಿಯಿತು

ಹಿರಿಯೋಲಗದ ಮುಂಗಡ ಪತ್ರಿಕೆಯ ಅಧಿವೇಶನವು ಇದೇ ೯ ನೇ ತಾರೀಕು ಮುಂಬರಿಯಿತು ಕಳೆದ ೬೭ ದಿನಗಳಲ್ಲಿ ೫೧ ಸಲ ಹಿರಿಯೋಲಗ ಸಭೆಸೇರಿ ಮಹತ್ವದ ೪೨ ಮಸೂದೆಗಳನ್ನು ಸ್ವೀಕರಿಸಿತು. ಇವುಗಳಲ್ಲಿ ೩೮ ಮಸೂದೆಗಳು ಸರಕಾರದ ಪರವಾಗಿದ್ದವು. ಪ್ರಶ್ನೋತ್ತರ ಸಮಯವೂ ಈ ಅಧಿವೇಶನದಲ್ಲಿ ಅತ್ಯಂತ ಮಹತ್ವದ್ದಾಗಿದ್ದಿತು. ಒಟ್ಟು ೨೭೫೧ ಪ್ರಶ್ನೋತ್ತರಗಳು ನಡೆದವು. ಕೆಳೆದವಾರ ಚಲಚಿತ್ರಪಟ ಕಾಯದೆಯ ತಿದ್ದುಪಡಿ ಮಸೂದೆ, ಕಾಫೀಪೇಟೆ ವಿಸ್ತರಣ ತಿದ್ದುಪಡಿ ಮಸೂದೆ, ಹಿಂದೀ ವಾರಸಾ ತಿದ್ದುಪಡಿ ಮಸೂದೆ ಹಿಂದೀ ಪಾಸಪೋರ್ಟ ಹಾಗು ವಿದೇಶೀಯರ ನೊಂದಣಿ ತಿದ್ದುಪಡಿ ಮಸೂದೆ ಮೊದಲಾದ ಒಂಭತ್ತು ಮಸೂದೆಗಳು ಸ್ವೀಕೃತವಾದವು. ಹಿಂದೂ ಕಾನೂನು ತಿದ್ದುಪಡಿ ಮಸೂದೆಯು ಮುಂದಿನ ಅಧಿವೇಶನಕ್ಕೆ ಮುಂದೂಡಲಾಯಿತು. ಕಾಫೀ ಮಾರ್ಕೆಟ ಕಾಯದೆ ತಿದ್ದುಪಡಿ ಮಸೂದೆಯಿಂದ ಕಾಫೀ ಮಂಡಳಕ್ಕೆ ಗಾಂಧಿ ನಿಧಿಗಾಗಿ ೯೫ ಸಾವಿರ ರೂಪಾಯಿ ಕಾಣಿಕೆ ಕೊಡಲು ಅವಕಾಶಮಾಡಿಕೊಡಲಾಯಿತು. ಹೈದರಾಬಾದದಲ್ಲಿಯ ಜಿಲ್ಹಾ ನ್ಯಾಯಾಧೀಶರು ಕೊಟ್ಟ ವಾರಸಾ ಪ್ರಶಸ್ತಿ ಪತ್ರಿಕೆಗಳನ್ನು ಹಿಂದುಸ್ಥಾನದಲ್ಲಿಯ ನ್ಯಾಯಾಲಯಗಳು ಮಾನ್ಯಮಾಡಬೇಕೆಂಬುದೆ ವಾರಸಾ ಕಾಯದೆ ತಿದ್ದುಪಡಿಯ ಆಶಯವಾಗಿತ್ತು. ಸರದಾರ ವಲ್ಲಭಭಾಯಿ ಪಟೇಲರು ವಿಮಾನ ಅಪಘಾತದಿಂದ ಪಾರಾದುದಕ್ಕಾಗಿ ಹಿರಿಯೋಲಗದ ಸದಸ್ಯರ ಪರವಾಗಿ ಅವರಿಗೆ ಬೆಳ್ಳಿಯ ವಿಮಾನವನ್ನು ಬಹುಮಾನವಾಗಿ ಕೊಡಲಾದುದು ಈ ಅಧಿವೇಶನದ ಮಹತ್ವದ ಘಟನೆಗಳಲ್ಲಿ ಒಂದಾಗಿದೆ. ನಿಯಂತ್ರಿಸುವ ಮಸೂದೆಯೂ ಸ್ವೀಕರಿಸಲಾಯಿತು.

# ಜಗಳದ ಕೊನೆ

ಲೇಖಕರು : ಶ್ರೀ. "ಭಾರದ್ವಾಜ"

ಅವರು ಅಷ್ಟೇನೂ ಶ್ರೀಮಂತರಾಗಿರಲಿಲ್ಲ ನಿಜ; ಅದರೂ ಆ ಹತ್ತು ರೂಪಾಯಿ ನೋಟು ಕಳೆದು ಹೋದದ್ದರಿಂದ ನಾಳೆ ಬೆಳಗ್ಗೆಯೆ ದಿವಾಳಿಯೆದ್ದು ಹೋಗುವ ಸಂದರ್ಭವೂ ಇದ್ದಿಲ್ಲ. ಮೇಲಾಗಿ ಶ್ರೀರಂಗಪಟ್ಟಣದಿಂದ ತಿರುಗಿ ಬೆಂಗಳೂರಿಗೆ ಹೋಗಲು ರಿಟರ್ನ್ ಟಿಕೆಟ್ ಇದ್ದುದರಿಂದ ಅವರು ಕೈಕಾಲು ಕಳೆದು ಕೊಳ್ಳಬೇಕಾಗಿಯೂ ಇದ್ದಿಲ್ಲ. ಅಂದಿನ ಮಧ್ಯಾಹ್ನದ ಊಟ ಉಪಚಾರವೂ ಆಗಿ ಹೋಗಿತ್ತು. ಮರುದಿನ ಶ್ರೀರಂಗಪಟ್ಟಣದಲ್ಲಿ ನಿಲ್ಲುವ ವಿಚಾರ ಮೊದಲೇ ಇರಲಿಲ್ಲ. ಪ್ರಯಾಣ ಕಾಲದಲ್ಲಿ ತಿಂಡಿತಿನಿಸುಗಳಿಗೆ ಬಹಳ ಹಣ ಬೇಕಾಗಿದ್ದಿಲ್ಲ. ಹಾಗೇನಾದರೂ ಬೇಕಾಗಿದ್ದರೂ ಸ್ವಲ್ಪಹಣವಿದ್ದೇ ಇತ್ತು. ಅವರು ಪೂರಾ ಬರಿಗೈಯವರೇನೂ ಆಗಿದ್ದಿಲ್ಲ.

"ನಾವೇನೂ ಸರ್ವಸ್ವವನ್ನು ಕಳೆದುಕೊಂಡಿಲ್ಲವಲ್ಲ, ಹೋದದ್ದು ನಮ್ಮದಲ್ಲ ಎಂದು ಬಿಟ್ಟರಾಯಿತು," ಎಂದ ರಂಗನಾಥ. ಹಣ ಕಳೆದುಕೊಂಡದ್ದಕ್ಕಾಗಿ ಅವಳ ಮೇಲೆ ಅಸಂತೋಷ ತೋರ್ಪಡಿಸಬಾರದೆಂದು ಅವನೆಷ್ಟು ಪ್ರಯತ್ನಿಸಿದರೂ ಅವನ ದನಿಯಲ್ಲಿ ಬೇಸರದ ಛಾಯೆ ಹಣಿಕಿಕ್ಕದಿರಲಿಲ್ಲ. ಎಷ್ಟಾದರೂ ಹಣವಲ್ಲವೇ ಅದು? ಈ ನೋಟುಗಳ ಸುರಿಮಳೆಯ ಕಾಲದಲ್ಲಿ ಹತ್ತು ರೂಪಾಯಿಯೆಂದರೆ ಅಷ್ಟು ದೊಡ್ಡ ಮೊತ್ತವಲ್ಲದಿದ್ದರೂ ತಿಂಗಳ ಕೊನೆಯಲ್ಲಿ ಈ ನಷ್ಟದ ಬಿಸಿ ಸ್ವಲ್ಪವಾದರೂ ತಗಲದೆ ಬಿಡಲಿಕ್ಕಿಲ್ಲವೆಂಬ ಭಯ ಅವನಿಗಿದ್ದೇ ಇತ್ತು.

ಆದರೂ ಜಾನಕಿಯನ್ನು ನೋಯಿಸಬಾರದೆಂದು ಅವನು ಬಹಳವಾಗಿ ಹೆಣಗುತಿದ್ದನು. ಅವರ ಸಂತೋಷವಿಹಾರ ತುಂಬ ಯಶಸ್ವಿಯಾಗಿತ್ತು. ಅವರ ಮದುವೆಯಾಗಿ ಒಂದು ವರ್ಷವಾಗಿದ್ದರೂ ಸಂಪೂರ್ಣ ನಿಶ್ಚಿಂತೆಯಿಂದ ಅವರಿಬ್ಬರು ತಾವೇ ತಾವಾಗಿ ಇಡಿ ದಿನವನ್ನು ಅವಿಚ್ಛಿನ್ನ ಸುಖ ಸಹವಾಸದಲ್ಲಿ ಕಳೆಯಲು ಅವರಿಗೆ ಅವಕಾಶ ದೊರೆತದ್ದು ಇದೇ ಮೊದಲು. ಬೆಂಗಳೂರಿನ ಜನಸಂದಣಿಯಲ್ಲಿ, ಮನೆಗಳ ಅಭಾವದ ಮಧ್ಯದಲ್ಲಿ, ಹಕ್ಕಿ ಗೂಡಿನಂಥ ನಾಲ್ಕು ಕೋಣೆಗಳ ಮನೆಯಲ್ಲಿ ಎರಡು ಕುಟುಂಬಗಳು ಆಶ್ರಯ ಪಡೆದಿರುವಾಗ ಎಳೆಯ ದಂಪತಿಗಳಿಗೆ ಸರಸಕ್ಕೆ ಅವಕಾಶವೆಷ್ಟು ದೊರಕೀತು? ಆದ್ದರಿಂದ ಎರಡು ದಿನ ರಜೆ ಪಡೆದು ರಂಗನಾಥ ಪ್ರೇಯಸಿಯೊಡನೆ ಶ್ರೀರಂಗಪಟ್ಟಣಕ್ಕೆ ಬಂದಿದ್ದ. ಆ ದಿನ ಅತ್ಯಂತ ಸುಖದಿಂದಲೂ ಕಳೆದಿತ್ತು. ಅವರು ಬಂದ ರೇಲಿನಲ್ಲಿ ಅಷ್ಟು ಗದ್ದಲವೂ ಇದ್ದಿಲ್ಲ. ಶ್ರೀರಂಗಪಟ್ಟಣದಲ್ಲಿ ಅವರು ಹಕ್ಕಿಗಳಂತೆ ನಲಿದು ಕಾವೇರೀ ತೀರದಲ್ಲಿ ಅತ್ಯಂತ ಏಕಾಂತವಾದ ಸ್ಥಳಗಳಲ್ಲಿ ವಿಹರಿಸಿದ್ದರು. ಹವೆಯೂ ತುಂಬ ಅನುಕೂಲವಾಗಿತ್ತು. ಇಷ್ಟು ಸವಿಸವಿಯಾಗಿದ್ದ ದಿನದ ಕೊನೆಗೆ ಬರಿ ಕಾಗದದ ತುಣುಕೊಂದು ವಿರಸಕ್ಕೆ ಕಾರಣವಾಗಬಾರದೆಂದು ರಂಗನಾಥ ಬಯಸಿದ್ದು ಸ್ವಾಭಾವಿಕವೇ ಆಗಿತ್ತು.

ಜಾನಕಿ ಗಂಡನ ಮಾತಿಗೆ ನಸುನಕ್ಕಳು. ಅವಳಿಗೂ ವಿರಸ ಬೇಕಾಗಿದ್ದಿಲ್ಲ. ಹಗಲೆಲ್ಲ ಅವನೊಡನೆ ಆನಂದದಿಂದ ಕಳೆದಿದ್ದಳು, ಸರಸವೇ ಸರಸವಾಗಿತ್ತು ಆ ಅನುಭವ. ಅವಳಿಗಾದರೂ ಆ ಹತ್ತು ರೂಪಾಯಿಯ ಅಷ್ಟೇನೂ ಮಹತ್ವದ್ದಾಗಿ ಕಾಣಿಸಲಿಲ್ಲ. ಆದರೂ ಅವಳ ಅಂತರಂಗ ಕಳವಳಿಸಿತ್ತು.

"ಅದೇನೋ ಸರಿ," ಅವಳು ದನಿಗೂಡಿಸಿದಳು. "ಹತ್ತು ರೂಪಾಯಿ ಈ ಕಾಲದಲ್ಲಿ ಯಾವ ಗಿಡದ ತೊಪ್ಪಲು? ಆದರೂ ನಿಮ್ಮ ಜೇಬುಗಳನ್ನೆಲ್ಲ ಇನ್ನೊಮ್ಮೆ ಹುಡುಕಿ ನೋಡಬಾರದೆ?"

"ಆಹಾ, ಅದಕ್ಕೇನಂತೆ!" ಎಂದು ರಂಗನಾಥ ಹದಿನೈದನೆ ಸಾರಿ ಜೇಬುಗಳನ್ನೆಲ್ಲ ಹಿಂದೆ ಮುಂದೆ ಮಾಡಿ ಸಂಶೋಧಿಸಿದನು. "ನೋಡಿದಿಯಲ್ಲ? ಅಲ್ಲಿ ಏನೂ ಇಲ್ಲ. ಬರಿ ಹಳೆ ಕಾಗದದ ಚೂರುಗಳು, ಆ ಫೋಟೋಗ್ರಾಫರನ ರಶೀದಿ ಮತ್ತು ರೇಲಿನ ಟಿಕೇಟು."

"ಆ ನೋಟು ಇದ್ದಿದ್ದರೆ ಫೋಟೋದ ಬಿಲ್ಲಿಗಾದರೂ ಆಗುತಿತ್ತು ಅಲ್ಲವೆ? ಹೇಗೆ ಮೂಡಿದೆಯೋ!" ಜಾನಕಿ ಆ ವಿಷಾದಕರ ನೋಟಿನಿಂದ ಮಾತು ಬದಲಿಸುತ್ತ ನುಡಿದಳು. "ನಾನು ಹುಬ್ಬುಗಂಟಿಕ್ಕಿದ್ದೆನೋ ಏನೋ ಅಂತ ಸಂಶಯ".

"ಅಲ್ಲೇ, ನನ್ನ ಜೇಬನ್ನೇ ಪರೀಕ್ಷಿಸಬೇಕೆನ್ನುತ್ತೀ ನೀನು. ಅದು ಅಲ್ಲಿ ಬರಬೇಕಾದರೂ ಹೇಗೆ? ನೀನು ನನಗೆ ಅದನ್ನು ಕೊಟ್ಟಿದ್ದರೆ ತಾನೆ?"

ಕಳೆದು ಹೋದ ನೋಟು ತಿರುಗಿ ಸಂಭಾಷಣೆಯ ನಡುವೆ ಪ್ರವೇಶಿಸಿತು.

"ಏನು ಹುಚ್ಚರು ನೀವು!" ಹುಡುಗಿ ಮಾರುತ್ತರ ಕೊಟ್ಟಳು. ಒಳಗೆ ಅಷ್ಟು ಕುದಿಯುರುವಾಗ ಮುಖ ಅರಳಿಸಿ ಮಾತಾಡುವ ತನ್ನ ಶಕ್ತಿ ಅವಳಿಗೇ ಆಶ್ಚರ್ಯವುಂಟುಮಾಡಿತ್ತು. "ಎಷ್ಟು ಸುಲಭವಾಗಿ ಮರೆಯುತ್ತೀರಿ, ಅಂತೇನೆ. ಸ್ವಾಮಿಯ ದೇವಸ್ಥಾನದಿಂದ ಹೊರ ಬರಬರುತ್ತಾ ನಿಮ್ಮ ಕೈಯಲ್ಲಿ ಅದನ್ನು ಕೊಟ್ಟದ್ದು —"

"ನಿನ್ನ ಚೀಲವನ್ನೊಮ್ಮೆ ಮುಗುಚಿ ಹಾಕಿ ನೋಡು." ರಂಗನಾಥನ ತಾಳ್ಮೆ ಸಡಿಲ ತೊಡಗಿತ್ತು. ಆಕೆಳು ಕೊಟ್ಟಿದ್ದರೆ ತನಗೆ ನೆನಪಿಲ್ಲದೆ ಇದ್ದೀತೆ? ಕೊಟ್ಟಿದ್ದರೂ ಅದು ಅವನ ಪಾಕೀಟಿನಲ್ಲಿ ಇರಬೇಕಾಗಿತ್ತು. ತನ್ನ ಹತ್ತಿರ ಇದ್ದ ಹತ್ತು ರೂಪಾಯಿ ನೋಟುಗಳ ಸಂಖ್ಯೆಯನ್ನರಿಯದಷ್ಟು ಶ್ರೀಮಂತನೇ ತಾನು?

"ಹುಡುಕುವ ಅವಶ್ಯವೇ ಇಲ್ಲ. ನೆನಪು ಮಾಡಿಕೊಳ್ಳಿರಿ, ನಿಮ್ಮ ಕೈಯಲ್ಲಿ ಅದನ್ನು ಕೊಡುತ್ತಾ, 'ಕೊಟ್ಟಿದ್ದೇನೆ, ನೋಡಿಕೊಳ್ಳಿ' ಅಂತ ಹೇಳಿದ್ದಿಲ್ಲವೆ?"

" ನನಗೇನೂ ನೆನಪಿಲ್ಲ --"

" ಪರಮಾತ್ಮಾ! ಹಾಗಾದರೆ ನಾನು ಸುಳ್ಳು ಹೇಳುತ್ತೇನೆಯೆ? ..."

"ಎಂಥ ಹುಚ್ಚಿಯೆ ನೀನು ? ಸುಳ್ಳು ಹೇಳುತ್ತಿಯೆಂದು ಯಾರು ಹೇಳಿದರು ? ನಿನಗೆ ಮರೆತು ಹೋಗಿದೆ ಅಷ್ಟೆ."

"ಖಂಡಿತ ಮರೆತಿಲ್ಲ!" ಈಗ ಅವಳ ತುಟಿಯ ನಗೆ ಮಾಯವಾಗಿತ್ತು. ಕೆನ್ನೆಯ ಮೇಲೆ ಬಿದ್ದ ಒಂದು ಕಂಬನಿಯಿಂದ ಪೌಡರು ಅಳಿಸಿ ಹೋಗಿತ್ತು.

"ಹೋಗಲಿ ಬಿಡು. ನಾವು ದಿವಾಳಿಯೆದ್ದಿಲ್ಲ ತಾನೆ?" ಎಷ್ಟು ಪ್ರಸನ್ನತೆಯನ್ನು ತೋರಿಸಿಕೊಂಡರೂ ಅವನ ದನಿಯಲ್ಲಿದ್ದ ನಿಷೇಧ ಭಾವ ಮಾಯ್ದಿರಲಿಲ್ಲ.

"ರೈಲು ಎಷ್ಟು ಹೊತ್ತಿಗೆ ಹೊರಡುತ್ತದೆ?" ಎಂದು ಅವಳು ಕೇಳಿದಳು.

"ಅರೂವರೆ ಅಂತ ಕಾಣುತ್ತದೆ."

" ಈ ರೈಲಿಗೇ ಹೋಗಿಬಿಡೋಣ ಅಲ್ಲವೆ?" ಜಾನಕಿಗೆ ಈಗ ಹೊರಡುವ ಆತುರವೇ ಹೆಚ್ಚಾಗಿತ್ತು. ಈ ದಿನಕ್ಕಾಗಿ ಅವಳೆಷ್ಟು ಕಾಲದಿಂದ ಹಾತೊರೆದಿದ್ದಳು! ಆದರೆ ಆ ಪೋಲಿ ನೋಟಿನ ದೆಸೆಯಿಂದ ಎಲ್ಲವೂ ಮಣ್ಣುಪಾಲಾಗಿ ಹೋಗಿತ್ತು.

"ಅದೇ ಒಳ್ಳೇದೆಂದು ತೋರುತ್ತದೆ."

ರಂಗನಾಥನಿಗೂ ತಳ್ಳಷ್ಟು ರೋಸಿ ಹೋಗಿತ್ತು. ಇಬ್ಬರೂ ರೇಲ್ವೆ ಸ್ಟೇಶನ್ನಿನ ಕಡೆ ಹೊರಟರು. ದಾರಿಯಲ್ಲಿ ಯಾರೂ ಇರಲಿಲ್ಲ. ಇದ್ದರೂ ಗುರುತಿಲ್ಲದ ಊರಲ್ಲಿ ಯಾರ ಭಯ? ಅವಳ ಕೈಯನ್ನು ಕೈಯಲ್ಲಿ ತೆಗೆದುಕೊಂಡು ಏನೂ ಸಂಭವಿಸಿರದಂತೆ ಅತ ಸಾಗಿದ. ಆದರೆ ಒಳಗೊಳಗೆ ಅವನಿಗೆ ಸಿಟ್ಟು ಬಂದಿತ್ತು. ತಾನೇ ಕಳೆದು ಈಗ ನನ್ನ ಮೇಲೆ ಹೊರಿಸುತಿದ್ದಾಳಲ್ಲ! ಹತ್ತು ರೂಪಾಯಿ ದೊಡ್ಡ ಗುಡ್ಡವಲ್ಲ. ಈ ಕಾಲದಲ್ಲಿ. ಆದರೆ ಅವಳ ಉತ್ತರದ ರೀತಿ ಅವನಿಗೆ ಸರಿಗಾಣಲಿಲ್ಲ.

"ಹತ್ತು ರೂಪಾಯಿಗೆ ಈ ಕಾಲದಲ್ಲಿ ಏನೂ ಬೆಲೆಯಿಲ್ಲ, ಏನನ್ನುತ್ತಿ?"

"ಹೋಗಲಿ ಬಿಡಿರಿ. ಯಾರೋ ಒಬ್ಬ ಬಡಪಾಯಿಗೆ ನಿಮ್ಮ ದೆಸೆಯಿಂದ ನಾಲ್ಕೂಟ ಸಿಕ್ಕಿದಂತಾಯಿತೆಂದು ಸಮಾಧಾನ ಹಚ್ಚಿಕೊಳ್ಳಿರಿ," ಅವಳು ಉತ್ತರವಿತ್ತಳು.

"ನನ್ನ ದೆಸೆಯಿಂದ?"

ಅವಳು ಸಿಡುಕಿನಿಂದ ಕೈಕೊಸರಿಸಿಕೊಂಡು ಸ್ವಲ್ಪ ದೂರ ಸರಿದು ಬೇಗಬೇಗ ನಡೆಯತೊಡಗಿದಳು. "ಒಳ್ಳೇದು ಹಾಗೇ ಮಾಡು!" ಎಂದು ಅವನು ಎರಡು ಮಾರು ದೂರದಿಂದಲೇ ನಡೆಯತೊಡಗಿದ.

"ನೋಡಿಲ್ಲಿ-" ಅತ ಪ್ರಾರಂಭಿಸಿದ.

"ಸಾಕು ಬಿಡಿರಿ. ಸುಮ್ಮನಿರಿ!"

"ಆಗಲಿ, ಆಗಲಿ!" ಈ ಆಟ ತನಗೇನು ಆಡಲು ಬಾರದೆ? ಎಷ್ಟು ಏರುತ್ತಾಳೋ ನೋಡೋಣ. ಅವನು ಅವಳ ಪಕ್ಕದಲ್ಲೆ ಸ್ವಲ್ಪ ಅಂತರದಲ್ಲಿ ನಡೆಯುತ್ತ, ನಿಶ್ಚಿಂತನಂತೆ ಯಾವುದೋ ಒಂದು ಹಾಡನ್ನು ಸಿಳ್ಳುಹಾಕತೊಡಗಿದನು.

ಸ್ಟೇಶನ್ನು ಸೇರಿ ಅವರು ಕರಿ ಹಲಗೆಯ ಮುಂದೆ ನಿಂತು ಗಾಡಿಗಳ ಸಮಯವನ್ನು ಅವಲೋಕಿಸತೊಡಗಿದ್ದರು. ಹುಡುಗಿ ತನ್ನ ಕೈ ಚೀಲವನ್ನು ಎರುರಿಗೆ . ಜೋತುಬಿಟ್ಟು ತಲೆಯೊಳಗೆ ಉದ್ಭವಿಸಿದ ಯಾವುದೋ ಘೋರವಾದ ಹಾಡೊಂದರ ತಾಲಕ್ಕೆ ಸರಿಯಾಗಿ ಅದನ್ನು ಅತ್ತಿತ್ತ ತೂಗಾಡಿಸುತಿದ್ದಳು.

"ಆರು ನಲ್ವತ್ತೇಳು, ಎರಡನೆ ಪ್ಲಾಟಫಾರ್ಮ್" ಎಂದು ಅವನು ಅವಳ ಕಡೆ ನೋಡದೆ ಗಾಳಿಯೊಡನೆ ಮಾತಾಡುವವನಂತೆ ಓದಿದ.

ಅವಳು ಗಡಿಯಾರದ ಕಡೆ ನೋಡಿದಳು. "ಐದೇ ನಿಮಿಷ ಉಳಿದಿದೆ. ಬೇಗನೆ ಆ ಕಡೆ ಹೋಗುವದೊಳಿತು," ಎಂದು ತನಗೇ ಹೇಳಿಕೊಳ್ಳುವಂತೆ ನುಡಿದಳು.

"ಮೊದಲು ಒಂದಿಷ್ಟು ಕಾಫಿ ಕುಡಿಯೋಣ ಅನಿಸುತ್ತದೆ," ಎಂದನಾತ.

"ಹಣ ಇದೆಯೆ ಸಾಕಷ್ಟು?"

"ಇಲ್ಲದೆ ಏನು?– ನೋಡಿಲ್ಲಿ, ಆ ಕಾಗದದ ಚೂರನ್ನು ಇನ್ನು ಮರೆತು ಬಿಡೋಣ, ಜಾನಕಿ."

"ನಾನಂತೂ ಮರೆತುಬಿಟ್ಟಿದ್ದೆ."

"ಇಲ್ಲ, ನೀನು ಮರೆಯಲಿಲ್ಲ."

"ಬಿಟ್ಟಿರಿ." ಎನಕೆಂದಳು. "ಕಾಫಿ ಕುಡಿಯಲು ಎಂಥ ಹೊತ್ತು ಸಾಕಷ್ಟು."

"ಮುಂದಿನ ರೈಲಿಗೆ ಹೋದರಾಯಿತು." ಹೀಗೆ ವಿರಸವಾಗಿದ್ದರೂ ಈ ದಿನ ಹೋಗಿಬಿಡುತ್ತದಲ್ಲಾ ಎಂದು ಅವನಿಗೆ ದುಃಖವಾಗತೊಡಗಿತ್ತು. ಅವಳನ್ನು ಸಂತೈಸುವ ಮನಸೂ ಆಗಿತ್ತು.

"ಕರ ಪಾಡಿ ಎನು ಸಿಗಬೇಕಾದ್ದಿದೆ?"

"ಒಂದು ಕಪ್ಪು ಕಾಫಿ ಕುಡಿದ ಹಾಗೆ ಆಗುತ್ತದೆ. ದರಿಯಾ ದೌಲತ ಬಾಗಿಗೆ ಹೋಗಿ ಸ್ವಲ್ಪ ಹೊತ್ತು ಕುಳಿತುಕೊಳ್ಳೋಣ. ಒಂಭತ್ತು ಕಾಲು ಗಂಟೆಗೆ ಮತ್ತೊಂದು ರೈಲಿದೆ. ತಿಂಗಳು ಬೆಳಕಿನ ದಿನ—"

ಅವಳು ಎಚ್ಚರಿಸಿದಳು. ಈಗ ದಾರಿಗೆ ಬರುತಿರುವ ಹಾಗೆ ಕಾಣುತ್ತದೆ. ಆದರೂ ಕೇಳಿದಳು: "ಆರೂ ನಲ್ವತ್ತೇಳಕ್ಕೇ ಹೋಗಬೇಕೆಂದು ಹೇಳುತಿದ್ದಿರಲ್ಲ!"

"ನಾನೆಲ್ಲಿ ಹೇಳಿದೆ? ಹೇಳಿದವಳು ನೀನು–"

"ನೋಡಿದಿರಾ ? ಹಲಗೆಯ ಮುಂದೆ ನಿಂತು ರೈಲು ಆರು ನಲುವತ್ತೇಳಕ್ಕೆ ಹೊರಡುವದೆಂದವರು ನೀವೊ –"

"ಮುಂದಿನ ರೈಲು ಎಷ್ಟು ಹೊತ್ತಿಗೆ ಅಂತ ನೀನು ಕೇಳಿದ ಮೇಲೆಯೊ–"

"ಮತ್ತೆ ನನ್ನ ಮೇಲೆಯೆ ಹಾಕುತ್ತೀರಲ್ಲ ! ನನಗೇನೂ ಗೊತ್ತಿಲ್ಲ–"

"ಏನು ಮಹಾರಾಯಳೇ, ನೀನು ಒಂಭತ್ತು ಕಾಲಕ್ಕೆ ಹೊರಡುವವಳೋ ಈಗಲೇ ಹೋಗುವವಳೋ ಹೇಳಿ ಬಿಡು."

ಜಾನಕಿ ತಿರುಗಿ ಹಲಗೆಯ ಕಡೆ ನೋಡಿದಳು. ಇಂದು ಯಾವ ಕೆಟ್ಟ ಗಳಿಗೆಯಲ್ಲಿ ಎದ್ದಿದ್ದಳೊ. ತಾನು ನುಡಿದದ್ದೇ ತಪ್ಪು, ನಡೆದದ್ದೇ ತಪ್ಪು ಎನಿಸಿತವಳಿಗೆ.

ಕೆಲ ಕ್ಷಣ ಹಾಗೆಯೆ ಸಾಗಿತು. ಹಠಾತ್ತಾಗಿ ರಂಗನಾಥ ಹೇಳಿದ: "ಸ್ವಲ್ಪ ಇರು ಇಲ್ಲೇ. ಇದೇ ಈಗ ಬಂದೆ."

ಉತ್ತರದ ದಾರಿ ಕಾಯದೆ ಅವನು ಅವಳನ್ನಲ್ಲೆ ಬಿಟ್ಟು "ಗಂಡಸರಿಗಾಗಿ" ಎಂದು ಬರೆದ ಕೋಣೆಯ ಕಡೆ ಹೊರಟುಹೋದನು.

ಅವನು ಕಣ್ಮರೆಯಾಗುವವರೆಗೂ ಅವಳು ನೋಡುತ್ತಲೆ ಇದ್ದಳು. ಅವನೆಷ್ಟು ಅಂತಃಕರಣದ ಮನುಷ್ಯ! ಆದರೂ ತಾನು ಆ ನೋಟನ್ನು ಅವನ ಕೈಯಲ್ಲಿ ಕೊಟ್ಟಿದ್ದೇ ನಿಜ. ಆದರೂ ಚಿಂತೆಯಿಲ್ಲ. ಹೀಗೆಂದುಕೊಂಡು ಅವಳು ತನ್ನ ಚೀಲದಲ್ಲಿ ಹುಡುಕಾಡಿ ತನ್ನ ಪುಟ್ಟ ಹಣದ ಚೀಲವನ್ನು ಹೊರತೆಗೆದಳು. ಅದರಲ್ಲಿ ಒಂದು ಹತ್ತು ರೂಪಾಯಿ ನೋಟು ಮತ್ತು ಸ್ವಲ್ಪ ಚಿಲ್ಲರೆ ಹಣವಿತ್ತು. ಅದು ಆ ನೋಟಾಗಿದ್ದಿಲ್ಲ, ನಿಜ. ಆದರೂ...

ಅವನು ಕೆಲ ನಿಮಿಷಗಳಲ್ಲಿ ತಿರುಗಿ ಬಂದಾಗ ಆ ನೋಟನ್ನು ಎತ್ತಿ ಹಿಡಿದಳು. ಆದರೆ ಅವನೂ ಕೈಯಲ್ಲಿ ಒಂದು ನೋಟು ಹಿಡಿದು ಎತ್ತಿ ತೋರಿಸುತಿದ್ದುದನ್ನು ಕಂಡು ಥಕ್ಕನೆ ತನ್ನದನ್ನು ಮುಚ್ಚಿ ಹಿಡಿದುಕೊಂಡಳು. ಅವಳಿಗೆ ಮೊದಲಿಂದ ಗೊತ್ತೇ ಇತ್ತು– ಅವನೇ ಯಾವ ಜೇಬಿನಲ್ಲೊ ತುರುಕಿಸಿ ಮರೆತುಬಿಟ್ಟಿದ್ದ.

"ಸಿಕ್ಕಿತು ಜಾನಕಿ," ಎಂದ ರಂಗನಾಥ. "ನೀನಂದದ್ದೇ ಸರಿ. ನನ್ನ ಒಳ ಜೇಬಿನಲ್ಲೇ ಇತ್ತು ನೋಡು."

ಜಾನಕಿ ನಾಚಿ ಲಗುಬಗೆಯಿಂದ ತನ್ನ ಕೈಯಲ್ಲಿದ್ದ ನೋಟನ್ನು ಉಡಿಯಲ್ಲಿ ತುರುಕಿಸಿದಳು. ರಂಗನಾಥ ಅವಳನ್ನು ತನ್ನ ಬಾಹುಗಳಿಂದ ಬಳಸಿನಕ್ಕು ನುಡಿದ: "ಅಲ್ಲೇ, ನಿನ್ನಲ್ಲಿಯೇ ಇತ್ತೆಂತ ನಟಿಸ ಹೊರಟಿದ್ದೆಯಾ—"

-ಹಿಸೆಯ ಪುಟಕ್ಕೆ

## ವಿಚಾರದ್ವಂದ್ವ

*ಈ ಶಿರೋನಾಮೆಯ ಕೆಳಗೆ ಜನಾಭಿಪ್ರಾಯವನ್ನು ಪ್ರಕಟಿಸಬೇಕೆಂದಿದ್ದೇವೆ. ಕೇವಲ ಸ್ಥಾನಿಕ ದೂರುಗಳನ್ನು ಬೆಳಕಿಗೆ ತರುವದು ಇದರ ಉದ್ದೇಶವಾಗಿರದೆ ಮಹತ್ವದ ವಿಷಯಗಳ ಮೇಲೆ ಚರ್ಚೆ ನಡೆಸಿ ಜನಾಭಿಪ್ರಾಯವನ್ನು ರೂಪಿಸುವದೇ ಗುರಿಯಾಗಿರುವದರಿಂದ ಇಲ್ಲಿ ಬಂದ ವಿಷಯಗಳ ಬಗ್ಗೆ ಅನುಕೂಲ ಮತ್ತು ಪ್ರತಿಕೂಲಾಭಿಪ್ರಾಯಗಳನ್ನು ಓದುಗರು ಬರೆದು ಕಳಿಸಿದರೆ ಸ್ವಾಗತಿಸಲಾಗುವದು.* —ಸಂ

❋

### ಸ್ವಾತಂತ್ರ್ಯದ ಬಳಿಕ

ಸ್ವಾತಂತ್ರ್ಯ ಸಿದ್ಧಿಯಾದಂದಿನಿಂದ ಒಂದು ಹೊಸ ವಾತಾವರಣವು ನಿರ್ಮಾಣವಾಗಿದೆ ಎಂಬ ಮಾತನ್ನು ಸಾಮಾನ್ಯ ಜನತೆಯ ಗಮನಕ್ಕೆ ತಂದುಕೊಡುವದೇ ಈ ಬರಹದ ಮೂಲೋದ್ದೇಶ. ಸ್ವಾತಂತ್ರ್ಯದ ಗೂಡ ಅದನ್ನು ಹೊರುವ ಹೊಣೆಯೂ ನಮ್ಮ ಮೇಲೆ ಬಿದ್ದಿದೆ. ಗಳಿಸಿದ ಸ್ವಾತಂತ್ರ್ಯವನ್ನು ಉಳಿಸಬೇಕಾದರೆ, ನಮ್ಮ ಹಿಂದಿನ ಮತ್ತು ಇಂದಿನ ನೋಟದಲ್ಲಿ ಮಾರ್ಪಾಟಾಗುವದು ಅತ್ಯವಶ್ಯ. ನಾವು ಸ್ವತಂತ್ರರಿಲ್ಲದಾಗ ಅಂದಿನ ಆಡಳಿತಗಾರರ ಧೋರಣೆಯ ಮೂಲಕ ಬಗೆ ಬಗೆಯ ಹೀನಸ್ಥಿತಿಗೆ ನಾವು ಇಳಿದೆವು. ಆಗ್ಗೆ "ಹಿಂದುಸ್ಥಾನದ ಸ್ಥಿತಿ ಹೀಗೇಕೆ?" ಎಂದು ಯಾರು ಕೇಳಿದರೂ ಆವಾಗಿನ ಆಡಳಿತಗಾರರ ಕಡೆಗೆ ಬೊಟ್ಟುಮಾಡಿ ತೋರಿಸಿ, ನಾವು ಪಾರಾಗಬಹುದಾಗಿತ್ತು. ಆದರೆ ಇಂದಿನ ಸ್ವತಂತ್ರಭಾರತದ ಬಗ್ಗೆ ಅದೇ ಪ್ರಶ್ನೆಯನ್ನು ಯಾರಾದರೂ ಕೇಳಿದರೆ ಯಾರ ಕಡೆಗೆ ಬೊಟ್ಟುಮಾಡಿ ತೋರಿಸಬಲ್ಲೆವು? ನಮ್ಮದೇ ಕೈ, ನಮ್ಮದೇ ಬಾಯಿ- ಪ್ರತಿಯೊಬ್ಬ ಭಾರತೀಯನೂ ತನ್ನದೇ ಆದ ಈ ಸ್ವತಂತ್ರ ದೇಶಕ್ಕೆ ಸೇವೆ ಸಲ್ಲಿಸುವ ಮನಃಸ್ಥಿತಿಗೆ ಬರಲೇಬೇಕಾಗಿದೆ. ಇಂಥ ಬದಲಾವಣೆ ಸಾಧ್ಯವಾಗಬೇಕಾದರೆ, ಯಾವರೀತಿಯಿಂದ ಎಂಬದನ್ನು ನೋಡುವಾ.

ಭಾರತದಲ್ಲಿಯ ಸಮಸ್ತ ಜನರಲ್ಲಿ ಐಕ್ಯವನ್ನು ನಿರ್ಮಾಣಮಾಡುವದು, ಸ್ವತಂತ್ರ ದೇಶದಿಂದ ನಮ್ಮ ಉನ್ನತಿಯನ್ನು ನಾವೇ ಹೇಗೆ ಸಾಧಿಸಿಕೊಳ್ಳಬಲ್ಲೆವೆಂಬ ಬಗ್ಗೆ ಜ್ಞಾನವನ್ನುಂಟುಮಾಡುವದು ಈ ಜ್ಞಾನವುಂಟಾದಲ್ಲಿ ಸ್ವಾತಂತ್ರ್ಯವನ್ನು ಅಚಂದ್ರಾರ್ಕ ಕಾಯುವದು ಅಪರಿಹಾರ್ಯ ಎಂಬದು ತಾನೇ ಹೊಳೆಯುವದು ಮತ್ತು ನಮ್ಮ ಉನ್ನತಿಯನ್ನು ನಾವು ಸಾಧಿಸಿಕೊಳ್ಳದೆ, ಹೋದರೆ ದೇಶದ ರಕ್ಷಣೆ ನಮ್ಮಿಂದಾಗದೆಂಬ ತಿಳುವಳಿಕೆಯನ್ನು ಹುಟ್ಟಿಸುವದು; ಇತ್ಯಾದಿ ಕ್ರಮಗಳಿಂದ ನಾವು ನಮ್ಮ ರಾಷ್ಟ್ರದ ಬಲವರ್ಧನೆಯನ್ನು ಮಾಡಲು ಶಕ್ಯವಿದೆ.

ಈ ವಿಚಾರಗಳು ತಲೆದೋರಿದ ಕೂಡಲೆ ದೇಶದ ಏಳ್ಗೆಯೂ ಜನತೆಯ ಏಳ್ಗೆಯೂ ಒಂದೇ ಆಗಿದೆಂದು ಕಂಡುಬರುವದು—ಜನತೆಯನ್ನು ಏಳ್ಗೆಯ ದಾರಿಗೆ ಹಚ್ಚುವ ಕೆಲಸವು ಸುಗಮವಾಗಬೇಕಾದರೆ ಜನತೆಯಲ್ಲಿಯ ಬಾಲವರ್ಗ ಮತ್ತು ಪ್ರೌಢ ವರ್ಗಗಳಿಗೆ, ಪ್ರತ್ಯೇಕ ತರಬೇತಿಯನ್ನು ಕೊಡಬೇಕಾಗುವದು.

ಬಾಲವರ್ಗವನ್ನು ಆದರ್ಶ ಸ್ವತಂತ್ರ ನಾಗರಿಕನ್ನದ ಹುಟ್ಟಿಕ್ಕೆ ಹುಟ್ಟಿಸುವ ಕಾರ್ಯವನ್ನು ಸರಕಾರವು ಶಿಕ್ಷಣ ಕೇಂದ್ರಗಳ ಮುಖಾಂತರ ನಡೆಸುವ ಉಪಕ್ರಮದಲ್ಲಿದೆ.

ಸಂಧಿಕಾಲದಲ್ಲಿ, ಪ್ರೌಢ ವರ್ಗದ ಹೊಣೆ ಎಷ್ಟಿದೆಯೆಂಬದನ್ನು ವರ್ಣಿಸಲಸಾಧ್ಯ! ಅಶಿಕ್ಷಿತರ ಸಂಖ್ಯೆಯೇ ಬಹು ಪ್ರಮಾಣದಲ್ಲಿದ್ದ ಈ ವರ್ಗವನ್ನು ಸುಧಾರಿಸುವ ಕಾರ್ಯವು ಬಹಳ ಕಠಿಣವಾದದ್ದು. ನಿರಕ್ಷರರನ್ನು ಸಾಕ್ಷರರನ್ನಾಗಿ ಮಾಡುವ ಕೆಲಸವೂ ಭರದಿಂದ ಸಾಗಿದೆ. ಆದರೆ ಸಾಕ್ಷರರಾದ ಕ್ಷಣಕ್ಕೆ ಈ ವರ್ಗದಲ್ಲಿ ತಿಳುವಳಿಕೆ ಹುಟ್ಟುವದೆಂದು ತಿಳಿಯಲಾಗದು. ಈ ತಿಳುವಳಿಕೆಯನ್ನು ಹುಟ್ಟಿಸಬೇಕಾದರೆ. ಶಿಕ್ಷಣಕ್ಕಿಂತಲೂ ಮಹತ್ವದ ಮಾರ್ಗವೆಂದರೆ ಆಧುನಿಕ ಪ್ರಜಾಸತ್ತೆಯ ವಿಚಾರಗಳನ್ನು ಈ ವರ್ಗದಲ್ಲಿ ಹರಡುವದು ಈ ಕೆಲಸವನ್ನು ಸ್ವಯಂಪ್ರೇರಿತ ನಾಗರಿಕರು ಅಥವಾ ಸರಕಾರವು ಮಾಡಬಹುದು. ಸರಕಾರವು ಈ ಕಾರ್ಯವನ್ನು ಆಕಾಶವಾಣಿ ಮತ್ತು ಚಲಚ್ಚಿತ್ರಗಳ ಮುಖಾಂತರ ಅಲ್ಪಕಾಲದಲ್ಲಿಯೇ ಸಾಧಿಸಬಹುದು.

ಈ ಕೆಲಸವನ್ನು ಸಾರ್ವಜನಿಕರಿಗೆ ಬಿಟ್ಟುಕೊಟ್ಟರೆ ದ್ರವ್ಯದ ಮತ್ತು ದುಡಿಯುವವರ ಅಭಾವದ ಮೂಲಕ ಪ್ರಗತಿ ಕುಂಠಿತವಾಗುವ ಭೀತಿಯು ಹೆಜ್ಜೆ ಹೆಜ್ಜೆಗೂ ಇದೆ. ಆಕಾಶವಾಣಿ ಮತ್ತು ಚಲಚ್ಚಿತ್ರಗಳಿಂದ ಕೊಡಲ್ಪಡುವ ಶಿಕ್ಷಣವು ಈ ವರ್ಗವನ್ನು. ಸ್ವತಂತ್ರ ವಿಚಾರಕ್ಕೆ ಹಚ್ಚುವಂಥದಿರಬೇಕು. ಪಕ್ಷ ಪಕ್ಷಗಳ ಧೋರಣವು ಅದರಲ್ಲಿರದೆ, ಸರ್ವ ಸಮ್ಮತವಾದ, ಮೂಲಭೂತ ತತ್ವಗಳಿಂದ ಒಡಗೊಂಡಿರಬೇಕು. ಚಿಕ್ಕವರು ಪ್ರೌಢರಾಗುವವರೆಗೆ ದೇಶದ ಆಗುಹೋಗುಗಳಲ್ಲಿ ಆಸಕ್ತಿಯನ್ನಿಟ್ಟು ದೇಶವನ್ನು ರಕ್ಷಿಸುವ ಕೆಲಸವು ಈ ವರ್ಗದ ಮೇಲೆಯೇ ಸದ್ಯಕ್ಕೆ ಇರುವುದರಿಂದ, ಈ ವರ್ಗವನ್ನು ಆದಷ್ಟು ಬೇಗ ಸುಧಾರಿಸುವದು ಮುಖ್ಯ. ಈಗಿನ ಪ್ರಕ್ಷುಬ್ಧ ವಾತಾವರಣವನ್ನು ಲಕ್ಷದಲ್ಲಿ ತಂದರೆ, ಈ ವರ್ಗವನ್ನು ಎಚ್ಚರಿಸುವಲ್ಲಿ, ಸರಕಾರವು ಎಲ್ಲ ಪ್ರಯತ್ನಗಳನ್ನು ಮಾಡಿಯೇ ತೀರುವದೆಂದು ಆಶಿಸುತ್ತೇನೆ.

—ಭೃಂಗ

× × ×

### ಮೂರನೇ ಮತ್ತು ಎರಡನೇ ತರಗತಿಯ ರೇಲ್ವೆ ಡಬ್ಬಿಗಳು

ಎಮ್. ಎಸ್. ಎಮ್. ರೈಲು ಡಬ್ಬಿಗಳಲ್ಲಿ ಕೆಲವು ಅನಾನುಕೂಲತೆಗಳನ್ನು ಎರಡನೇ ಮತ್ತು ಮೂರನೇ ತರಗತಿಯಲ್ಲಿ ಪ್ರವಾಸ ಮಾಡುವ ಪ್ರವಾಸಿಕರು ಕಂಡಿರಲು ಸಾಕು—ಈ ಅವ್ಯವಸ್ಥೆಯು ಏಕೆ ಉಳಿದಿರುವದೋ ಊಹಿಸಲು ಕಠಿಣ. ಹೊಸ ಮಾದರಿಯ ಡಬ್ಬಿಗಳನ್ನು ಶೀಘ್ರದಲ್ಲಿಯೇ ಉಪಯೋಗಕ್ಕೆ ತರಬೇಕೆಂದು ರೇಲ್ವೆ ಅಧಿಕಾರಿಗಳು ಪ್ರಯತ್ನಿಸುತ್ತಿರುವರೆಂದು ನಾವು ಒಂದು ವೇಳೆ ಊಹಿಸಿದ್ದರೂ ಅಂಥ ಡಬ್ಬಿಗಳು ಉಪಯೋಗದಲ್ಲಿ ಬರಲಿಕ್ಕೆ ಕನಿಷ್ಠ ೧-೨ ವರ್ಷಗಳ ಅವಧಿ ಬೇಕು. ಅಲ್ಲಿಯ ವರೆಗೆ ಇದ್ದ ಡಬ್ಬಿಗಳನ್ನು ಕಾಲಕ್ಕೆ ಸರಿಪಡಿಸದೆ ಉಪಯೋಗದಲ್ಲಿ ಇಡುವದೆಂದರೆ, ಪ್ರವಾಸಿಕರ ಹಣಕ್ಕೆ ಯೋಗ್ಯ ಪ್ರತಿಫಲವಿಲ್ಲದಂತಾಗುವದು. ಆದ್ದರಿಂದ ಈ ಕೆಳಗಿನ ವಿಷಯಗಳಲ್ಲಿ ರೇಲ್ವೆ ಅಧಿಕಾರಿಗಳು ಅಸ್ಥೆವಹಿಸುವರೆಂದೂ ಮುಂದೆ ಈ ದೋಷಗಳು ಮತ್ತೂ ತಲೆಎತ್ತದಂತೆ ಅವರು ಜಾಗರೂಕರಾಗುವರೆಂದೂ ಆಶಿಸುವೆ.

ಈ ದೋಷಗಳು ೨ ಮತ್ತು ೩ ನೇ ತರಗತಿಯ ಡಬ್ಬಿಗಳಿಗೆ ಸಂಬಂಧಿಸಿರುತ್ತವೆ—

(೧) ಎಷ್ಟೋ ಡಬ್ಬಿಗಳಲ್ಲಿ ಕೆಲವು ವಿದ್ಯುದ್ದೀಪಗಳು ಒಡೆದು ಹೋಗಿರುತ್ತವೆ.

(೨) ಪಾಯಖಾನೆಯಲ್ಲಿಯ ನಳವು ಎಡಬದಿಗೆ ಕಿಂಚಿತ್ ಎತ್ತರದಲ್ಲಿ ಇದ್ದು ಮೈಮೇಲೆ ಮಲಿನ ನೀರು ಚಿಮ್ಮಿ ಬಟ್ಟೆಗಳು ಒದ್ದೆಯಾಗುತ್ತವೆ. ಆದ್ದರಿಂದ ಈ ತೋಟಿಗಳನ್ನು ಮುಂಬದಿಗೆ ಮಧ್ಯದಲ್ಲಿ ಸಾಕಷ್ಟು ಕೆಳಗೆ ನಿರ್ಮಿಸುವದು ಯೋಗ್ಯ.

(೩) ಎಲ್ಲ ಡಬ್ಬಿಗಳು ಒಳ ಹೊರಗೆ ಚೊಕ್ಕಾಗಿರುವಂತೆ ದಕ್ಷತೆ ವಹಿಸಬೇಕು. ಈ ದೆಸೆಯಲ್ಲಿ ಬಹಳ ಅನಾಸ್ಥೆ ತಲೆದೋರುತ್ತದೆ.

ಇನ್ನು ಎರಡನೇ ತರಗತಿಯ ಡಬ್ಬಿಗಳ ವಿಷಯ.

ಈ ತರಗತಿಯಲ್ಲಿ ಹಳೇ (ಅಂದರೆ ಮೊದಲಿನ ೨ ನೇ ತರಗತಿ) ಮತ್ತು ಹೊಸ (ಅಂದರೆ ಮೊದಲಿನ ಇಂಟರ) ಡಬ್ಬಿಗಳ ಸಮಾವೇಶವಿದೆ. ಹಳೇ ಡಬ್ಬಿಗಳಲ್ಲಿ ಮೊದಲಿನ ಪಾಶ್ಚಿಮಾತ್ಯ ಪದ್ಧತಿಯ ಪಾಯಖಾನೆಗಳಿರುತ್ತವೆ. ಇವುಗಳನ್ನು ಉಪಯೋಗಿಸುವದು ಹಿಂದೀಯರಿಗೆ ಬಹಳ ಅನಾನುಕೂಲ. ಈ ಪಾಯಖಾನೆಗಳನ್ನು ಹಿಂದೀ ಮಾದರಿಗೆ ಪರಿವರ್ತಿಸಬೇಕು ಇಲ್ಲವೆ ಹಿಂದೀ ಮಾದರಿಯ ಪಾಯಖಾನೆಗಳನ್ನೂ ಪ್ರತ್ಯೇಕವಾಗಿ ನಿರ್ಮಿಸಬೇಕು. ಹೊಸ ಡಬ್ಬಿಗಳಲ್ಲಿ (ಅಂದರೆ ಮೊದಲಿನ ಇಂಟರ) ದೀಪಗಳನ್ನು ತೆಗೆಯುವ ಹಚ್ಚುವ ವ್ಯವಸ್ಥೆ ಎಷ್ಟೋ ಡಬ್ಬಿಗಳಲ್ಲಿ ಕಂಡು ಬರುವದಿಲ್ಲ. ಇದರಿಂದ ಇಡೀ ರಾತ್ರಿ ದೀಪಗಳ ಬೆಳಕಿನಲ್ಲಿಯೇ ಪ್ರವಾಸ ಮಾಡುವ ಪ್ರಸಂಗ ಒದಗುತ್ತದೆ. ಎಷ್ಟೋ ಡಬ್ಬಿಗಳಲ್ಲಿಯ ಆಸನಗಳು ಸಾದಾಬಟ್ಟೆ (ಕ್ಯಾನ್‌ವಾಸ್) ಯಿಂದ ಮಾಡಿದ್ದಿರುತ್ತವೆ. ಇವು ಬಹು ಬೇಗ ಮಲಿನವಾಗಿ ಅವುಗಳ ಮೇಲೆ ಕೂಡ್ರಲು ಮನಸ್ಸು ಒಪ್ಪುವದಿಲ್ಲ. ಮೊದಲಿನಂತೆ ಮೇಣಕಾಪಡದ ಆಸನಗಳನ್ನೇ ಬಳಕೆಯಲ್ಲಿ ತರುವದುತ್ತಮ. ಕೆಲವು ಹಳೇ [ಮೊದಲಿನ ೨ ನೇ ತರಗತಿ] ಡಬ್ಬಿಗಳಲ್ಲಿ ಮೇಲ್ಪದಿಗೆ ಮಲಗುವ ಬಗ್ಗೆ ಇದ್ದ ಆಸನಗಳ ಮಗ್ಗಲಿಗೆ ಹವೆಯು ಸಲುವಾಗಿ ಕಬ್ಬಿಣದ ಜಾಳಿಗೆಗಳು ಮೊದಲು ಇದ್ದವು. ಆದರೆ ಅವು ಹರಿದು ಹೋದ ಮೇಲೆ ಮತ್ತೆ ಜಾಳಿಗೆಗಳನ್ನು ಉಪಯೋಗಿಸದೆ ಕಟ್ಟಿಗೆಯ ಹಲಿಗೆಗಳನ್ನು ಕೂಡ್ರಿಸಿ ಒಳನುಗ್ಗುವ ಹವೆಯನ್ನು ತಡೆದದ್ದನ್ನು ಕಾಣಬಹುದು. ಹಿಂದೀಯರಿಗೆ ಹವೆಯ ಅವಶ್ಯಕತೆ ಇಲ್ಲೆಂದೊ ಅಥವಾ ಪಾಶ್ಚಾತ್ಯರು ತೊಲಗಿದನಂತರ, ಈ ಅಧಿಕಾರಿಗಳನ್ನು ಕೇಳುವವರು ಯಾರೂ ಇಲ್ಲವೆಂದೋ ಕಟ್ಟಿಗೆಯ ಹಲಿಗೆಗಳನ್ನು ಕೂಡ್ರಿಸಿರುವರು.?

— ವಿಹಂಗ

### ಜಗಳದ ಕೊನೆ

(೫ನೇ ಪುಟದಿಂದ)

"ಹೋಗಲಿ ಬಿಡಿರಿ, ಕಾಫಿ ಕುಡಿದು ಬರೋಣಂತೆ."

ಅಷ್ಟರಲ್ಲಿ ರೈಲು ಹೊರಟು ಹೋಗಿತ್ತು. ಸ್ಟೇಶನ್ನಿನಲ್ಲಿ ಜನರಾರೂ ಇರಲಿಲ್ಲ. ಇದ್ದ ಒಬ್ಬಿಬ್ಬ ಕೂಲಿಯವರನ್ನು ಲೆಕ್ಕಿಸದೆ ಅವರು ಕೈಯಲ್ಲಿ ಕೈ ತುರುಕಿಸಿ ಹಾಗೆಯೆ ಸ್ಟೇಶನ್ನಿನಿಂದ ಹೊರಗೆ ಹೋದರು.

"ಉಳಿದ ಹಣದಿಂದ ನಿನಗೊಂದು ರೇಶ್ಮೆ ಬ್ಲೌಜು ಕೊಳ್ಳಬೇಕೆಂದಿದ್ದೇನೆ ಜಾನಕಿ-" ದರಿಯಾ ದೌಲತ್ ಬಾಗನ್ನು ಪ್ರವೇಶಿಸುತ್ತ ಅವನು ನುಡಿದ.

"ಬೇಡ ಬೇಡ, ಸುಮ್ಮನೆ ದುಡ್ಡು ಹಾಳು."

ಗಂಟೆ ಏಳಾಗಿತ್ತು. ಬಾಗಿನಲ್ಲಿ ಜನರು ವಿಶೇಷ ಇರಲಿಲ್ಲ. ಅವರೊಂದು ನಿರ್ಜನವಾದ ಮೂಲೆಯನ್ನು ಆಕ್ರಮಿಸಿದರು.

"ಆದರೆ ನನ್ನ ತಪ್ಪಿಗಾಗಿ ತಪ್ಪು ದಂಡ ತೆರಬೇಡವೆ? ಇಗೋ."

ರಂಗನಾಥ ಅವಳನ್ನು ಬರಸೆಳೆದು ತುಟಿಯ ಮೇಲೊಂದು ಮುತ್ತನ್ನು ಒತ್ತಿದ.

"ಏನು ಹುಡುಗಾಟಿಕೆಯಿದು!" ಆದರೆ ಅವಳು ಆ ಕಾಣಿಕೆಯನ್ನು ಮೆಚ್ಚದೆ ಇರಲಿಲ್ಲ.

ಆದರೆ ಆ ಹತ್ತು ರೂಪಾಯಿಯ ನೋಟು ಎಲ್ಲಿ ಹೋಗಿತ್ತೆಂದು ರಂಗನಾಥ ಗುಡಿಯ ಕೆಲಸಗಾರನೊಬ್ಬನಿಗೇ ಗೊತ್ತಿತ್ತು. ಅದು ಅವನಿಗೆ ಒಂದು ವಾರದ ಗಡಂಗಿನ ವೆಚ್ಚಕ್ಕೆ ಸಾಲುವಷ್ಟಿತ್ತು. ಆದ್ದರಿಂದ ಅದನ್ನು ಅವನು ಮಾತಾಡದೆ ಎತ್ತಿಕೊಂಡಿದ್ದ. ಸಮಂಜಸವಾದ ಸಂಪದ್ವಿತರಣವಾಗಬೇಕೆಂಬ ಸಾಮ್ಯವಾದಿ ತತ್ವ ಅವನವರೆಗೂ ಮುಟ್ಟಿತ್ತು. ಆದ್ದರಿಂದ ಅವನ ಆತ್ಮಸಾಕ್ಷಿ ಅಷ್ಟೇನೂ ಕೊರಗಲಿಲ್ಲ. ಆಗಾಗ್ಗೆ ಇಂಥ "ಸ್ವಾಮಿಕೃಪೆ" ಯಾಗದಿದ್ದರೆ ಆ ಬಡಪಾಯಿ ಮುದುಕನಿಗೆ ಜೀವನದಲ್ಲಿ ಯಾವ ಸುಖ ದೊರೆತೀತು? ಅತ್ತ ಆ ದಂಪತಿಗಳೋ ಸ್ವಲ್ಪ ವಿವೇಕಶೀಲರಾಗಿದ್ದುದರಿಂದ, ಇಡಿ ಜೀವಮಾನವೇ ಮುಂದಿರುವಾಗ ಎಷ್ಟೋ ಸಾವಿರ ಇಂಥ ನೋಟುಗಳು ಬಂದು ಕೈಬಿಟ್ಟು ಹೋಗುವದೆಂದರಿತು, ಸಮಸ್ಯೆಯನ್ನು ಬಗೆಹರಿಸಿಕೊಂಡಿದ್ದರು.

(ಇಂಗ್ಲಿಷ್ ಕತೆಯ ಆಧಾರದಿಂದ)

ಅಮೇರಿಕದಲ್ಲಿ ಶ್ರೀಮತಿ ನೆಲ್ಲಿತೇಲೋರಾಸ್ ಎಂಬವಳಿದ್ದಾಳೆ. ಕಳೆದ ೧೫ ವರ್ಷಗಳಿಂದ ಅವಳು ಅಮೇರಿಕದ ಸಂಯುಕ್ತ ಸಂಸ್ಥಾನದ ನಾಣ್ಯ ಮುದ್ರಣಾಲಯದ ನಿರ್ದೇಶಿಕೆಯಾಗಿ ಕೆಲಸ ಮಾಡುತ್ತಿದ್ದಾಳೆ. ಅವಳನ್ನು ಮೊದಲು ಆ ಕೆಲಸಕ್ಕೆ ನಿಯಮಿಸಿದ್ದು ಅಧ್ಯಕ್ಷ ರೂಸ್ವೆಲ್ಟರು. ನಾಲ್ಕನೆಯ ಸಲ ಅವಳಿಗೀಗ ಅದೇ ಕೆಲಸದಲ್ಲಿರಲು ಆದೇಶ ಬಂದಿದೆ. ಆದರೆ ಅವಳೇನು ಹೇಳುತ್ತಾಳೆ ಬಲ್ಲಿರಾ? "ಹೆಂಡತಿತನ, ತಾಯ್ತನಗಳಿಗಿಂತ ಹೆಚ್ಚು ವೈಭವಪೂರ್ಣವಾದ ಮತ್ತೊಂದು ಜೀವನಕ್ರಮ ಹೆಂಗಸಿಗಿಲ್ಲ" ಎಂದು ಅವಳ ಉದ್ಗಾರ.

# ಸರ್ವೋದಯ ಸಮ್ಮೇಲನ

ಶ್ರೀ. ವಿನೋಬಾ ಭಾವೆಯವರು ಸರ್ವೋದಯ ಸಮ್ಮೇಲನದಲ್ಲಿ ಮಾಡಿದ ಭಾಷಣಗಳು ಹರಿಜನ ಪತ್ರಿಕೆಯಿಂದ ಅನುವಾದಿಸಲ್ಪಟ್ಟಿವೆ.

(೧)

## ಸಮ್ಮೇಲನದ ಉದ್ದೇಶ

ಪರಸ್ಪರರಲ್ಲಿ ಸಹಕಾರ ಸಂಬಂಧ ಬೆಳೆಯುವದಕ್ಕಾಗಿ ಸರ್ವೋದಯ ಸೇವಕರು ಪ್ರತಿವರ್ಷ ಸಮ್ಮಿಲಿತರಾಗುವದರ ಉದ್ದೇಶವಾಗಿದೆ. ಸನ್ಮಿತ್ರರೆಲ್ಲ ಸಮ್ಮಿಲಿತರಾದಾಗ ಅವರು ಬೇರೆ ಬೇರೆ ವಿಷಯುಗಳನ್ನು ಚರ್ಚಿಸುವರಲ್ಲದೆ ತಮ್ಮ ತಮ್ಮ ಅಭಿಪ್ರಾಯುಗಳನ್ನು ತಿಳಿಸುವರು; ಆದುದರಿಂದ ಉದ್ದೇಶನಿರೂಪಣೆಯ ಕಲಮಿನಲ್ಲಿ ಆ ಉದ್ದೇಶವನ್ನು ಸೇರಿಸಲು ಅಡ್ಡಿ ತೋರುವದಿಲ್ಲ. ಆದರೆ ಸಾಮಾನ್ಯ ಧ್ಯೇಯಪ್ರೇರಿತರಾಗಿ ಅದೇ ಬಗೆಯ ವಾತಾವರಣದಲ್ಲಿ ಸಮ್ಮಿಲಿತರಾಗಿ ನಿಷ್ಠೆ ಮತ್ತು ಆತುರತೆಯಿಂದ ಮೌನವಾಗಿ ವಿಚಾರ ವಿನಿಮಯ ಮಾಡುವದಕ್ಕಿಂತ ಇಂಥ ಭಾಷಣಗಳಿಗೆ ನಾನು ಕಡಮೆ ಮಹತ್ವವನ್ನು ಕೊಡುತ್ತೇನೆ. ಇದೀಗ ನಾವು ಮುಗಿಸಿದ ಸಾಮೂಹಿಕ ಸೂತ್ರಯಜ್ಞದಿಂದ ಮುದ್ದೆಯನ್ನು ತಿಳಿದುಕೊಳ್ಳಬಹುದಾಗಿದೆ. ಈ ಬಗೆಯಾಗಿ ನೂಲುವವರ ಗುಂಪು ನೋಡುವದು ಇತ್ತೀಚೆ ಯಾವಾಗಾದರೊಮ್ಮೆ. ಆದರೆ ಅಂಥ ಗುಂಪು ಕೂಡುವದಕ್ಕಾಗಿ ನಾನು ಯಾವಾಗಲೂ ಬಯಸುತ್ತೇನೆ. ಅಂತೆಯೆ ನೂಲುವದಕ್ಕಾಗಿ ಸೇರಿದ ಸ್ತ್ರೀಪುರುಷರ ಸಮೂಹದಲ್ಲಿ ಸೇರಿಕೊಂಡಾಗ ನಾನು ಸಮಾಧಿ ಹೊಂದಿದಂತೆನಿಸುವದು. ನಾವು ಎಲ್ಲರೂ ಕೂಡಿಕೊಂಡು ಸಾಮೂಹಿಕ ರೀತಿಯಿಂದ ರಾಮನಾಮವನ್ನು ಇಂತು ಒಳ್ಳೆ ದಕ್ಷತೆಯಿಂದ ಭಜಿಸುವದು ಕಲ್ಯಾಣಕಾರಕವೆಂದು ಭಾವಿಸುತ್ತೇನೆ.

ಮಾರ್ಗದರ್ಶನವನ್ನು ಪಡೆದು ನಾವು ಪುಣ್ಯವಂತರಾಗಿದ್ದೇವೆ. ಆ ಮಹಾತ್ಮನು ತೋರಿದ ಬೆಳಕಿನಲ್ಲಿ ನಡೆಯಲು ಮತ್ತೊಮ್ಮೆ ನಾವು ಬದ್ಧರಾದರೆ ನಾವು ಇಂತು ಸಮ್ಮಿಲಿತರಾದುದು ಸಾರ್ಥಕವಾಗುವದು. ಅದರಿಂದ ನಾವು ವಿಶುದ್ಧರಾಗುವೆವು ಮತ್ತು ನಮ್ಮ ಶಕ್ತಿಸಾಮರ್ಥ್ಯಗಳು ಬೆಳೆಯುವವು.

## ಸರ್ವೋದಯ ಸಂಘಟನೆ

ನಮ್ಮದೊಂದು ಶಿಥಿಲವಾದ ಸಂಘಟನೆಯೆಂದು ಹೇಳಲಾಗುತಿದೆ. ಅನೇಕ ಸಲ ಇದರ ನಿಜ್ಜಳ ಅರ್ಥವೇನೆಂಬುದನ್ನು ಹೇಳಲು ಬರುವುದಿಲ್ಲ. ಸಂಸ್ಥೆಯೆಂಬುದಕ್ಕೆ ಸಂಘಟನೆ ಎಂದು ಹೇಳುವದಾದರೆ ಇದು ಅಕೃತ್ರಿಮ ಸಂಸ್ಥೆಯೆಂದು ನಾನು ಹೇಳುವೆ. ಇದನ್ನೇನು ಒಣ ದಂಭಕ್ಕಾಗಿ ಕೂಡಿಸಿದ್ದಲ್ಲ. ತೀರ ಸ್ವಾಭಾವಿಕವಾದ ಪರಸ್ಪರ ಸಹಕಾರ ಸಂಬಂಧದ ಫಲವಿದು.

ಇಂಥದೊಂದು ಶಿಥಿಲವಾದ ಸಂಸ್ಥೆಯಿಂದ ಏನಾದರೂ ಪ್ರಯೋಜನವಿದೆಯೇ? ಎಂದು ನನಗೆ ಕೇಳಲಾಗುತ್ತದೆ. ಉದ್ದೇಶಪೂರ್ವಕವಾಗಿ ಹೀಗೆ ಪ್ರಶ್ನಿಸಲಾಗುತ್ತದೆ. ಯಾವುದೊಂದು ಯಂತ್ರದ ಗಾಲಿಗಳು ಅದಕ್ಕೆ ಜೋಡಿಸಿದ ರಜ್ಜುಗಳಿಂದ ತಿರುಗಬೇಕಾದರೆ ಅದು ಹೆಚ್ಚು ಗಟ್ಟಿಯಿರಬೇಕಲ್ಲದೆ ಅವಶ್ಯವಿದ್ದಷ್ಟು ಬಿಗಿಯೂ ಇರಬೇಕು. ಆ ಗಾಲಿಗಳಿಗೆ ಎಣ್ಣೆಯನ್ನು ಹಾಕಬೇಕಾಗುವದು. ಯಂತ್ರಶಾಸ್ತ್ರದ ನಿಯಮವಿದು. ಶಿಥಿಲವಾದ ರಜ್ಜುವಿನಿಂದ ಘರ್ಷಣ ಆಗುವದಿಲ್ಲ. ಆದರೆ ಸಡಿಲಾದ ರಜ್ಜುವು ಗಾಲಿಗಳನ್ನು ತಿರುಗಿಸಲಾರದು. ಸಂಸ್ಥೆಗಳಿಗೂ ಇವೇ ತತ್ವಗಳು ಅನ್ವಯಿಸುತ್ತವೆ. ಯೋಗ್ಯ ರೀತಿಯಿಂದ ಕಾರ್ಯ ನಡೆಯಬೇಕಾದರೆ ಅವು ಹೆಚ್ಚು ಬಿಗಿಯಾಗಿದ್ದು ಶಿಸ್ತನ್ನು ಪಾಲಿಸಬೇಕಾಗುವದು. ಮತ್ತು ಪ್ರೇಮವೆಂಬ ತೈಲದಿಂದ ಘರ್ಷಣವನ್ನು ಕಡಮೆ ಮಾಡಬೇಕಾಗುವದು. ಆದರೆ ಸರ್ವೋದಯ ಸಮಾಜಕ್ಕೆ ಇದು ಅನ್ವಯಿಸಲಾರದು. ಏಕೆಂದರೆ ಮಹತ್ವದವೆಂದು ನಾವು ಭಾವಿಸುವ ಬೇರೆ ಬೇರೆ ಚಟುವಟಿಕೆಗಳನ್ನು ಕಾರ್ಯರೂಪದಲ್ಲಿ ತರುವ ಯಂತ್ರವಿದೆಂದು ಭಾವಿಸಲಾಗಿಲ್ಲ. ಆ ಉದ್ದೇಶಕ್ಕಾಗಿ ನಾವು ವಿವಿಧ ಸಂಸ್ಥೆಗಳನ್ನು ಸಂಸ್ಥಾಪಿಸಬೇಕೆಂದಿದ್ದೇವೆ ಮತ್ತು ಸರ್ವಸೇವಾಸಂಘವೆಂಬ ಹೆಸರಿನಿಂದ ಅವನ್ನೆಲ್ಲ ಒಟ್ಟುಗೂಡಿಸಬೇಕೆಂಬ ಪ್ರಯತ್ನದಲ್ಲಿ ನಾವು ಇದ್ದೇವೆ. ನಮ್ಮ ಕಾರ್ಯವು ಆ ಸಂಘದ ಮುಖಾಂತರ ಸಾಗಬಲ್ಲುದು. ತತ್ವ ಮತ್ತು ಧ್ಯೇಯಗಳ ಬಗ್ಗೆ ನಾವು ಸರ್ವೋದಯ ಸಮಾಜದ ಮುಖಾಂತರ ವಿಚಾರವಮಾಡಿ ಅವುಗಳ ಪ್ರಸಾರ ಮಾಡಬಲ್ಲೆವು. ಹೆಚ್ಚು ಸಂಘಟಿತ ಸಂಸ್ಥೆಗಿಂತ ಇಂಥ ಶಿಥಿಲವಾದ ಸಂಸ್ಥೆಯೇ ಈ ಬಗೆಯ ಕಾರ್ಯ ಮಾಡಲಿಕ್ಕೆ ಹೆಚ್ಚು ಸಮರ್ಥವಾಗಿದೆ.

## ಸ್ವಂತದ ನಿವೇದನ

ಕಳೆದ ಸಲ ಸಮ್ಮೇಲನ ಮುಗಿದ ಕೆಲ ದಿನಗಳಲ್ಲಿ ನಾನು ಹೊಸದಿಲ್ಲಿ, ಪೂರ್ವ ಪಂಜಾಬದ ಕೆಲ ಭಾಗ ಮತ್ತು ಉತ್ತರದಲ್ಲಿ ಉಳಿದ ಸ್ಥಳಗಳ ಸಂಚಾರ ಕೈಕೊಂಡೆನು. ಇದರಿಂದ ವಿಶೇಷ ಕಾರ್ಯ ಸಾಧ್ಯವಾಯಿತೆಂದು ನಾನು ಹೇಳಲಾರೆ. ಮುಖ್ಯ ಜಾತಿಗಳಲ್ಲಿ ಉಂಟಾಗಿದ್ದ ವಿಷಮಭಾವನೆ ಮತ್ತು ನಿರಾಶ್ರಿತರಲ್ಲಿಯ ಪರಾವಲಂಬಭಾವನೆ ಬಹುಮಟ್ಟಿಗೆ ಕಡಮೆಯಾದುದು ಈ ಅವಧಿಯಲ್ಲಿ ಆದ ಮಹತ್ವದ ಬದಲಾವಣೆ. ಈ ಬದಲಾವಣೆಗೆ ನಾನು ವಿಶೇಷ ಮಹತ್ವ ಕೊಡುವದಿಲ್ಲ; ಆದರೆ ಧಾರ್ಮಿಕ ಪ್ರತ್ಯೇಕತಾ ಭಾವನೆಯನ್ನು ಕಡಮೆ ಮಾಡುವ ಸಂಧಿಯೂ ಆಗ ನನಗೆ ದೊರೆತಿತು. ಹತ್ತು ವರುಷಗಳ ಹಿಂದೆ ನಾನು ಮೂಲ ಅರಬ್ಬೀ ಭಾಷೆಯಲ್ಲಿಯೆ ಕುರಾಣದ ಅಭ್ಯಾಸ ಪ್ರಾರಂಭ ಮಾಡಿದಾಗಲೆ ಪರಮಾತ್ಮನು ನನಗೆ ತಿಳಿಯದೆ ಈ ಕಾರ್ಯಕ್ಕಾಗಿ ನನ್ನನ್ನು ತರಬೇತಿಗೊಳಿಸಿದನೆಂದು ತೋರುತ್ತದೆ. ಇದರಿಂದ ಮುಸಲ್ಮಾನರು ತಮ್ಮವರಲ್ಲಿಯೆ ನಾನೊಬ್ಬ ಎಂದು ತಿಳಿದುಕೊಂಡು ನನ್ನನ್ನು ಪ್ರೀತಿಸುತಿದ್ದುದನ್ನು ನಾನು ಕಂಡುಕೊಂಡೆ. ಅಜಮೀರ ಮತ್ತು ಗುರಗಾವ ಎರಡೂ ನಗರಗಳಲ್ಲಿ ಮುಸಲ್ಮಾನರು ಪ್ರೇಮದಿಂದ ನನ್ನನ್ನು ಬರಮಾಡಿಕೊಂಡರು. ಗುರಗಾವ ಜಿಲ್ಹೆಯಲ್ಲಿ ಕೆಲ ಒಳ್ಳೆ ಕಾರ್ಯಕರ್ತರನ್ನು ಇಡಲು ಸಾಧ್ಯವಾಯಿತು. ಅವರು ಒಳ್ಳೆ ಕಾರ್ಯವನ್ನು ಮಾಡುತಿರುವರು. ಎರಡೂ ಜಾತಿಗಳಲ್ಲಿ ಸ್ನೇಹ ಸಂಬಂಧವು ಬಹಳಮಟ್ಟಿಗೆ ಹೆಚ್ಚಿದೆ. ದಿಲ್ಲಿ, ಅಜಮೀರ, ಅಲೀಗಡ, ಹೈದರಾಬಾದ, (ದಕ್ಷಿಣ) ಮೊದಲಾದ, ದೇಶದ ಇತರ ಭಾಗಗಳಲ್ಲಿ ಇದೇ ಬಗೆಯ ಕಾರ್ಯವನ್ನು ನಾವು ಮಾಡಿದ್ದಾದರೆ ಮಹತ್ವದ ದೇಶಸೇವೆಯನ್ನು ಮಾಡಿದಂತಾಗುವದು. ಇಲ್ಲಿಂದ ನಾನು ಹೈದರಾಬಾದಕ್ಕೆ ಹೋಗಬಯಸುವೆ.

## ಖಾದಿಯ ಮಹತ್ವ

ಗುಜರಾಥವೊಂದನ್ನು ಬಿಟ್ಟರೆ ನಾನು ಹೋದಲ್ಲೆಲ್ಲ ಹೂವಿನ ಮಾಲೆಗಳಿಂದ ನನ್ನನ್ನು ಸ್ವಾಗತಿಸಲಾಯಿತು. ಗುಜರಾಥದಲ್ಲಿ ಮಾತ್ರ ನೂಲಿನ ಮಾಲೆಗಳನ್ನು ಸಮರ್ಪಿಸಲಾಯಿತು. ಇದೀಗ ಪರಿಸ್ಥಿತಿಯಿಂತಿದೆ.

ಶ್ರಾವಣಮಾಸ (ಜುಲೈ ಅಗಷ್ಟ) ದಲ್ಲಿ ಒಬ್ಬ ಮನುಷ್ಯ ಕುರುಡನಾದ. ಅದಕ್ಕೂ ಮೊದಲು ಅವನಿಗೆ ಎಲ್ಲೆಲ್ಲಿಯೂ ಹಸಿರು ಕಾಣುತಿದ್ದಿತು. ಆದರೀಗ ಆ ಕುರುಡನಿಗೆ ಅದು ಕಾಣದಂತಾಗಿದೆ ಎಂದು ತುಳಸೀದಾಸರು ವರ್ಣಿಸಿದಂತೆ ನನ್ನ ಸ್ಥಿತಿಯಾಗಿದೆ. ಹಸಿರು ಜಗತ್ತೆಲ್ಲ ಆ ಮನುಷ್ಯನ ಸ್ಮೃತಿಪಟಲದಲ್ಲಿ ತುಂಬಿದ್ದರಿಂದ ಅವನ ಕಲ್ಪನೆಯಲ್ಲೆಲ್ಲ ಹಸಿರು ಬಣ್ಣವೆ ತುಂಬಿ ಹೋಗಿತ್ತು. ಅದೇ ರೀತಿಯಾಗಿ ಆಶ್ರಮದಲ್ಲೆಲ್ಲ ಖಾದಿ ಮತ್ತು ನೂಲಿನ ಲಡಿಗಳಿಂದ ಸುತ್ತುವರಿಯಲ್ಪಟ್ಟ ನಾನು ಎಲ್ಲೆಲ್ಲಿಯೂ ಅದನ್ನೆ ಕಾಣಬಯಸಿದ್ದೆ. ಆದರೆ ದೇಶದಲ್ಲಿ ಅದರ ಅಭಾವವನ್ನು ಕಂಡು ಬಹುವಿಷಾದಪಟ್ಟೆ. ಕದಾಚಿತ್ ಆ ಕುರುಡ ಮನುಷ್ಯನಂತೆ ನಾನಾಗಿರಬಹುದು. ಆದರೆ ನಾನು ಅಂಥನಾದೆ ಎಂದು ನಾನು ತಿಳಿಯುವದಿಲ್ಲ. ಸರ್ವೋದಯದ ನಮ್ಮ ಕಲ್ಪನೆಯಲ್ಲಿ ಖಾದಿಗೆ ಗೌರವದ ಸ್ಥಾನವಿದೆ. ಬೇರೆ ಯಾವದೂ ಅದನ್ನು ಸ್ಥಾನಭ್ರಷ್ಟಮಾಡದು ಖಾದಿಯ ಸಂದೇಶವನ್ನು ಬರಿ ಹಿಂದುಸ್ಥಾನ ಮಾತ್ರವಲ್ಲ ಇಡೀ ಜಗತ್ತು ಎಂದಾದರೊಂದು ದಿನವಾದರೂ ಒಪ್ಪಿಕೊಳ್ಳಲಿಕ್ಕೆಬೇಕಾಗುವದು ಎಂದುನಾವೀಗ ಹೇಳುವ ಧೈರ್ಯ ಮಾಡದಿದ್ದರೂ ಮುಂದೆ ಎಂದಾದರೊಂದು ದಿನ ನಾವು ಧೈರ್ಯದಿಂದ ಹೇಳಬಲ್ಲೆವೆಂದು ಶ್ರೀ ಕಾಕಾಸಾಹೇಬ ಕಾಲೇಲಕರರು ಇಂದು ಮುಂಜಾನೆ ಹೇಳಿದರು. ಶ್ರೀ ಕಾಕಾಸಾಹೇಬರ ಈ ವಾಣಿಯು ಋಷಿವಚನದಂತೆ ನನಗೆ ತೋರಿತು. ಬಾಪೂನನ್ನು ಉಲ್ಲೇಖಿಸಿಯೇ ಅವರು ಹೀಗೆ ಹೇಳಿದ್ದುಂಟು. ಆದರೆ ಬಾಪೂ ಇವರ ಜೊತೆಗೆ ತಮ್ಮ ಭವಿಷ್ಯ ನೋಟವನ್ನೂ ಅವರು ಬೆರೆಸಿದ್ದರು. ಬಾಪೂ ಆಗಲಿ ಕಾಕಾ ಆಗಲಿ ತಮ್ಮ ವಿಚಾರ ಶಕ್ತಿಯನ್ನು ಕಳೆದುಕೊಂಡಿರುವರೆಂದು ಹೇಳಲಾಗದು. ಅವರು ಹೇಳಿದ್ದು ಯುಥೋಚಿತವಾಗಿದೆ. ರಚನಾತ್ಮಕ ಕಾರ್ಯಕ್ರಮದ ಉಳಿದ ಅಂಗಗಳಾದರೂ ಒಳ್ಳೆಯದಿದ್ದು ಅದನ್ನು ಕಾರ್ಯರೂಪದಲ್ಲಿ ತರಬೇಕಾಗಿದೆ. ಆದರೆ ಸರ್ವೋದಯದ ಪ್ರತಿನಿಧಿಗಳು ಅಲ್ಲ. ಏಕೆಂದರೆ ಉಳಿದ ಅಂಗಗಳು ಬೇರೆ ವಿಚಾರಗಳಿಗೆ ವಿಸಂಗತವೇನು ಆಗಿರುವದಿಲ್ಲ. ಉದಾಹರಣೆಗಾಗಿ ಕುಷ್ಠ ರೋಗಿಗಳ ಶುಶ್ರೂಷೆ ಮಾಡುವದು. ಅವಶ್ಯವೆಂಬ ಬಗ್ಗೆ ಯಾರೂ ಸಂಶಯಪಡಲಾರರು ಅದೇರೀತಿ ಹಳ್ಳಿಯ ಸ್ವಚ್ಛತೆ ಮತ್ತು ಆರೋಗ್ಯದ ಪ್ರಶ್ನೆ ಇದೆ. ಆದರೆ ಖಾದಿಯ ವಿಷಯ ಹಾಗಲ್ಲ. ಅದಕ್ಕೆ ವಿರೋಧವಿದೆ. ಯಾಂತ್ರಿಕ ಯುಗವೆಂದು ಕರೆಯಲಾಗುತಿರುವ ಈ ಯುಗದಲ್ಲಿ ಅದು ವಿಸಂಗತವಾಗಿದೆಯೆಂದು ಹೇಳಲಾಗುತ್ತದೆ. ಹಳೆಯ ಜನರು ಕಲಿಯುಗದ ಹೋರಾಟವೆಂದು ಇದಕ್ಕೆ ಕರೆಯುವರು. ಕಲಿಯ ವಿರುದ್ಧ ನಾವು ಬಂಡೆದ್ದಿರುವೆವು. ಆದುದರಿಂದ ನಮ್ಮ ವಿಚಾರ ಮತ್ತು ಸೇವೆಯಲ್ಲಿ ಖಾದಿಯು ಕೇಂದ್ರಸ್ಥಾನವನ್ನು ಪಡೆಯಲಿಕ್ಕೆಬೇಕು. ಉಳಿದುವೆಲ್ಲ ಅದರ ಸುತ್ತಲೂ ತಮ್ಮ ಸ್ಥಾನಗಳಲ್ಲಿ ಇರತಕ್ಕದ್ದು. ಉಳಿದ ಸೇವಾಕಾರ್ಯವನ್ನು ನಾವು ಮಾಡಬಹುದು ಮಾಡಲಿಕ್ಕೆಬೇಕು ಆದರೆ ಖಾದಿ ಕಾರ್ಯದಲ್ಲಿ ನಾವು ಸೋಲನ್ನೊಪ್ಪಿಕೊಂಡರೆ ನಮ್ಮ ಕಾರ್ಯಕ್ರಮದಲ್ಲಿಯ ಇತರ ವಿಷಯಗಳು ಗೌಣ ಮತ್ತು ಕಡಿಮೆ ಮಹತ್ವದವಾಗಿ ಪರಿಣಮಿಸುವವೆಂಬಲ್ಲಿ ಸಂದೇಹವಿಲ್ಲ.

ದಯವಿಟ್ಟು ನನ್ನ ಬಗ್ಗೆ ತಪ್ಪುತಿಳಿವಳಿಕೆ ಮಾಡಿಕೊಳ್ಳಬೇಡಿರಿ. ಖಾದಿಯನ್ನು ನಾವು ಬಿಟ್ಟುಗೊಟ್ಟರೆ ಅಸತ್ಯ ಮತ್ತು ಹಿಂಸಾಚಾರಗಳಲ್ಲಿ ನಾವು ತೊಡಗಿದೆವೆಂದು ಹೇಳಿದಂತಾಗಲಿಲ್ಲ. ಆದರೆ ಖಾದಿಯು ಅವ್ಯವಹಾರ್ಯ ಕಾರ್ಯಕ್ರಮವೆಂದು ನಾವು ಭಾವಿಸಿದ್ದಾದರೆ ನಾನು ಬಯಸುವ ಸಾಮಾಜಿಕ ಅಹಿಂಸೆ ಇಲ್ಲವೆ ಶಾಂತಿಯು ಗಂಡಾಂತರದಲ್ಲಿ ಬೀಳುವದೆಂದು ನನಗೆ ಎನಿಸುತ್ತದೆ.

ಕಳೆದ ಮೂವತ್ತು ವರುಷಗಳಿಂದ ನಾವು ನೂಲುತಿರುತ್ತೇವೆ ಮತ್ತು ಕೈನೂಲಿನಲ್ಲಿ ಸುಧಾರಣೆ ಮಾಡಲು ಪ್ರಯತ್ನಿಸುತಿರುತ್ತೇವೆ. ಆದರೂ ಕೈನೂಲು ನೇಕಾರನಿಗೆ ಇನ್ನೂ ಬಹಳ ತೊಂದರೆ ಕೊಡುತ್ತದೆ. ಅವನು ಆ ನೂಲನ್ನು ನೇಯಲು ಸಿದ್ಧನಾಗುವದಿಲ್ಲ. ಹೆಚ್ಚು ರೊಕ್ಕಕೊಟ್ಟು ನೇಯಲು ಅವನ ಮನವೊಲಿಸಬೇಕಾಗುವದು. ಕೊನೆಯ ವರೆಗೂ ಹೀಗೆ ಮಾಡುವದು ಶಕ್ಯವಿಲ್ಲ ಎಂಬುದನ್ನು ನಾವು ತಿಳಿದುಕೊಳ್ಳಲಿಕ್ಕೆಬೇಕು. ನೂಲು ಗಿಂಟೆ ಮಾಡುವದರಿಂದ ನೇಕಾರನ ತೊಂದರೆ ದೂರಾಗುವದೆಂದು ನನ್ನ ಮನವರಿಕೆಯಾಗಿದೆ. ಹಾಗಾದಲ್ಲಿ ಸುಲಭವಾಗಿ ಅದನ್ನು ನೇಯಿಸಬಹುದು. ಮನೆಯಲ್ಲಿ ಕೂಡ ನೇಯಬಹುದು ಮತ್ತು ನಮ್ಮ ಅನೇಕ ಸ್ವಾವಲಂಬಿ ನೂಲುವವರು ಸ್ವಾವಲಂಬಿ ನೇಕಾರರೂ ಆಗಬಹುದು.

ಪ್ರತಿಯೊಬ್ಬ ರಚನಾತ್ಮಕ ಕಾರ್ಯಕರ್ತನ ಸುತ್ತಲೂ ಖಾದೀ ವಾತಾವರಣವುಂಟಾಗಬೇಕು ಆ ಬಗೆಯ ವಾತಾವರಣವಿಲ್ಲದಿದ್ದರೆ ನಿಮ್ಮ ಸುತ್ತಲೆಲ್ಲ ಗಾಂಧಿ ತತ್ವದ ವಾತಾವರಣವನ್ನು ನೀವು ಬಹಳ ಮಟ್ಟಿಗೆ ನಿರ್ಮಿಸಿಕೊಳ್ಳಲಾರಿರಿ.

(೨)

## ಭಂಗಿಗಳ ಕೆಲಸ

ಹರಿಜನ ಸಮಸ್ಯೆಯನ್ನು ಬಿಡಿಸದಿರುವದು ದುಃಖದಾಯಕ ಮತ್ತು ಲಾಂಛನಾಸ್ಪದವಾದ ಮಾತಾಗಿದೆ. ನಿಯಮಿತವಾಗಿ ಮತ್ತು ಶ್ರೇಷ್ಠ ಪ್ರಾರ್ಥನಾಪೂರ್ವಕವಾಗಿ ನಾನುಸತತಎರಡು ವರುಷ ಭಂಗೀ ಕೆಲಸವನ್ನು ಮಾಡಿದೆ. ಈಗಲೂ ಅದೇ ಕೆಲಸದಲ್ಲಿ ನಾನು ತೊಡಗಬಹುದಾಗಿತ್ತು ಆದರೆ ಅದು ಹಳ್ಳಿಯಲ್ಲಿಯ ಭಂಗೀಕೆಲಸವಾಗಿತ್ತು. ನಗರದಲ್ಲಿಯ ಈ ಕೆಲಸಕ್ಕಿಂತ ಅದು ಬಹಳ ಹಗುರ. ನಗರದಲ್ಲಿಯ ಭಂಗೀ ಕೆಲಸ ಮನುಷ್ಯರು ಮಾಡತಕ್ಕಂತಹ ಕೆಲಸವಾಗಿರುವುದಿಲ್ಲ. ಹೊಸದಿಲ್ಲಿಯಲ್ಲಿ ಭಂಗಿಗಳ ಒಂದು ಸಭೆಯಲ್ಲಿ ಕೂಲಿಕಾರ ಮಂತ್ರಿಗಳಾದ ಶ್ರೀ ಜಗಜೀವನರಾಮರು ಮನುಷ್ಯರು ಮಾಡಲಿಕ್ಕೆ ಕೂಡ ಅಯೋಗ್ಯವಾಗಿದ್ದ ಈ ಉದ್ಯೋಗವನ್ನು ಬಿಟ್ಟುಗೊಡಬೇಕೆಂದು ನಿಶ್ಚಿತವಾದ ಸಲಹೆ ಕೊಟ್ಟರು. ಉಳಿದ ಉದ್ಯೋಗಗಳಲ್ಲೆಲ್ಲ ಬಹಳ ಸ್ಪರ್ಧೆ ನಡೆದಿದೆ. ಬ್ರಾಹ್ಮಣರು ಕೂಡ ಚರ್ಮ ಹದ ಮಾಡುವ ಮತ್ತು ಜೋಡು ತಯಾರ ಮಾಡುವ ಉದ್ಯೋಗವನ್ನು ಕೈಕೊಂಡಿರುವರು. ಒಂದು ಕಾಲಕ್ಕೆ ಈ ಉದ್ಯೋಗಗಳೆಂದರೆ ಅಸ್ಪೃಶ್ಯರು ಮಾಡತಕ್ಕ ಉದ್ಯೋಗಗಳೆಂದು ಎಣಿಸಲಾಗಿತ್ತು. ಆದರೆ ಭಂಗಿಯವರನ ಕೂಡ ಯಾವ ಸ್ಪರ್ಧೆ ನಡೆಯುವದಿಲ್ಲ. ಅವನಿಗೆ ಇಂದಿಗೂ ಭಂಗಿ ಕೆಲಸ ಮಾಡುವದು ತಪ್ಪಿಲ್ಲ. ಏಕೆಂದರೆ ಸಮಾಜಕ್ಕೆ ಕೆಲಸದ ಎಂದು ಯಾರ ಕ್ಷೇಮದಿಂದ ಮನುಷ್ಯನು ಭಂಗಿಯಿಂದ ದಿನ್ಯವೇ ಇದಕ್ಕೆ ಕಾರಣವಾಗಿದೆ ಎಂದು ಮುಂತಾಗಿ ಅವರು ಕಾರ್ಯ ಈ ರೀತಿ ಕೆಲಸ ಕೊಡುವದಕ್ಕೆ ಕಾರಣಗಳನ್ನು ಸೂಚಿಸ ಮಾಡಿದರು. ಶ್ರೀ ಜಗಜೀವನರಾಮರು ಈ ಬಗ್ಗೆ ನನ್ನ ಅಭಿಪ್ರಾಯ ಕೇಳಿದರು. ಅದಕ್ಕೆ ಒಪ್ಪಿಗೆ ಕೊಡದೆ ಬೇರೆ ಮಾರ್ಗ ನನಗೆ ಕಾಣಲಿಲ್ಲ.

ಶ್ರೀ ಅಪ್ಪಾಸಾಹೇಬ ಪಟವರ್ಧನರ ಪರಿಚಯ ನಿಮಗೆಲ್ಲರಿಗೂ ಇದೆ. ಭಂಗಿ ಕೆಲಸ ಮಾಡಲು ಅಪ್ಪಣೆ ಕೊಡಬೇಕೆಂದು ಜೇಲಿ ಅವರು ತುರಂಗದಲ್ಲಿ ಸತ್ಯಾಗ್ರಹವನ್ನು ಮಾಡಿದ್ದರು. ತುರಂಗದಿಂದ ಬಿಡುಗಡೆಯಾಗಿ ಬಂದ ನಂತರ ಒಂದು ನಗರದಲ್ಲಿ ಅವರು ಈ ಕೆಲಸವನ್ನು ಪ್ರಾರಂಭಿಸಿದರು. ಆ ಕೆಲಸ ಬಹಳ ಕಠಿನವಾದ್ದರಿಂದ ಸೋಲನ್ನೊಪ್ಪಿ ಆ ಕೆಲಸವನ್ನು ಕೆಲ ದಿನಗಳಲ್ಲಿ ಬಿಟ್ಟು ಕೊಡಬೇಕಾಯಿತು ಎಂದು ನನಗೆ ಹೇಳಿದರು. ಸಮಾಜದಲ್ಲಿ ಅವನನ್ನು ಕೀಳೆಂದು ಭಾವಿಸಿ ಉಳಿದ ಎಲ್ಲ ಕೆಲಸವನ್ನು ಬಿಟ್ಟು ಅದನ್ನು ಮಾತ್ರ ಮಾಡಲು ಅವನನ್ನು ಒತ್ತಾಯಪಡಿಸಿ ಆ ಉದ್ಯೋಗವು ಮನುಷ್ಯರು ಮಾಡತಕ್ಕ ಉದ್ಯೋಗವಲ್ಲ ಎಂದು ನಾವು ಮಾಡಿದ್ದು ನಿಶ್ಚಿತ. ಈ ಒತ್ತಾಯದ ಕೆಲಸದಿಂದ ಭಂಗಿಯನ್ನು ಮುಕ್ತ ಮಾಡಲಿಕ್ಕೆ ಬೇಕು. ಈ ಕೆಲಸದಲ್ಲಿ ನಾವೆಲ್ಲ ಭಾಗವಹಿಸಿ ಅದರಲ್ಲಿ ಸುಧಾರಣೆ ಮಾಡಿದರೆ ಮಾತ್ರ ನಾವು ಹೀಗೆ ಮಾಡಬಲ್ಲೆವು ಮತ್ತು ಪ್ರತಿಯೊಬ್ಬ ಈ ಕೆಲಸವನ್ನು ಕೈಕೊಳ್ಳಬಲ್ಲನು.

## ಅಂತ್ಯೋದಯ

ಸರ್ವೋದಯಕ್ಕಿಂತ ಅಂತ್ಯೋದಯವೆ ಇದಕ್ಕೆ ತಕ್ಕ ಮದ್ದು ಎಂದು ಶ್ರೀ ಅಪ್ಪಾಸಾಹೇಬರು ಸೂಚಿಸಿದರು. ಕಟ್ಟ ಕಡೆಯವನ ಉದ್ಧಾರವೆಂದರೆ ಅಂತ್ಯೋದಯ. ಎಲ್ಲರ ಉದ್ಧಾರದಲ್ಲಿ ಕಟ್ಟ ಕಡೆಯವನ ಉದ್ಧಾರ ಅಡಕವಾಗಿದೆ ಎಂಬುದು ನಿಶ್ಚಿತ. ಆದರೆ ಕಟ್ಟ ಕಡೆಯವನ ಉದ್ಧಾರ ಧ್ಯೇಯವನ್ನು ಒತ್ತಿ ಹೇಳುವದಕ್ಕಾಗಿ ಕೊನೆಯವನಿಂದಲೆ ಕಾರ್ಯ ಪ್ರಾರಂಭವಾಗಬೇಕು. ಭಂಗಿಗಳ ಬಗ್ಗೆ ನಾವು ಮೊದಲು ವಿಚಾರ ಮಾಡಬೇಕೆಂಬದನ್ನು ನಾನು ಒಪ್ಪುತ್ತೇನೆ. ಆದರೆ ಸರ್ವೋದಯ ಶಬ್ದವನ್ನು ಬದಲು ಮಾಡಬೇಕಾಗಿಲ್ಲ. ಏಕೆಂದರೆ ಉಳಿದವರೆಲ್ಲರ ಉದ್ಧಾರವಾಗದೆ ಭಂಗಿಗಳು ಮಾತ್ರ ಉಳಿದಿರುವದು ಎಂದಾಗುವದಿಲ್ಲ. ಈ ದುರ್ದೈವೀ ಜಗತ್ತಿನಲ್ಲಿ ನಾವೆಲ್ಲ ಕೀಳ್ಪಟ್ಟಿಕ್ಕಿದಿದ್ದು ಎಲ್ಲರ ಉದ್ಧಾರವಾಗಬೇಕಾಗಿದೆ. "ಪರಮಾತ್ಮನೆ, ನಿಜವಾದ ಮಾರ್ಗವು ನಿನಗೊಬ್ಬನಿಗೇ ಗೊತ್ತು. ಅಲ್ಪಗಳಲ್ಲಿ ಅಲ್ಪರಾದವರನ್ನು ಮತ್ತು ಶ್ರೇಷ್ಠರಲ್ಲಿ ಶ್ರೇಷ್ಠರಾದವರನ್ನು ನೀನು ಎತ್ತಿಕೊಂಡು ಹೋಗುವಿ" ಎಂದು ತುಳಸೀದಾಸರು ತಮ್ಮದೊಂದು ಶ್ಲೋಕದಲ್ಲಿ ಹೇಳಿರುವರು.

## ಅಪರಿಗ್ರಹ

ಕಳೆದ ವರ್ಷ ನಾನು ಅಪರಿಗ್ರಹ ತತ್ವವನ್ನು ಉಲ್ಲೇಖಿಸಿದ್ದೆ. ಪರಿಗ್ರಹ ತತ್ವವನ್ನು ಭಂಗಿಗಳ ಪ್ರಶ್ನೆಯಂತೆಯೇ ನಿರ್ಮೂಲನಗೊಳಿಸಬೇಕು. ದೇಶದಲ್ಲಿಯ ಇಂದಿನ ಪರಿಸ್ಥಿತಿ ಅದನ್ನು ಅಪೇಕ್ಷಿಸುತ್ತದೆ. ಬೇರೆ ಮಾರ್ಗದಿಂದ ತಿಕ್ಕಾಟವನ್ನು ತಪ್ಪಿಸಲಾಗದು. ಅಜಮೀರದಲ್ಲಿ ಮಾರವಾಡಿಗಳಲ್ಲಿ ಮತ್ತು ಸಿಂಧಿಗಳಲ್ಲಿ ದ್ವೇಷಭಾವನೆ ಬೆಳೆಯುತಿರುವದನ್ನು ನಾನು ಕಂಡೆ, ಸಿಂಧಿಗಳೀಗ ಬೇರೆ ಉದ್ಯೋಗವನ್ನು ಹುಡುಕುತಿರುವುದರಿಂದ ಆ ಭಾವನೆಯೀಗ ಕಡಮೆಯಾಗತೊಡಗಿದೆ. ಎಲ್ಲರಿಗೂ ಸಾಕಾಗುವಷ್ಟು ಅಹಾರೋತ್ಪಾದನೆ ಆಗದ ಪರಿಸ್ಥಿತಿ ದೇಶದಲ್ಲಿ ಇರುವ ವರೆಗೆ ಒಂದಿಲ್ಲೊಂದು ಕಾರಣದಿಂದ ಜಾತಿ ಜಾತಿಗಳಲ್ಲಿ ದ್ವೇಷಭಾವನೆ ಬೆಳೆಯುತ್ತಲೆ ನಡೆಯುವದೆಂದು ನಾವು ಆಗ ಹೇಳಿದ್ದುಂಟು. ಇಂದು ಹಿಂದೂ ಮುಸಲ್ಮಾನರಲ್ಲಿ ಗೊಂದಲವೆದ್ದರೆ ನಾಳೆ ಮಾರವಾಡಿ ಸಿಂಧಿಗಳಲ್ಲಿ ದ್ವೇಷಭಾವನೆ ಬೆಳೆವುದು; ನಾಡಿದು ಬ್ರಾಹ್ಮಣ ಬ್ರಾಹ್ಮಣೇತರ ಸ್ವರೂಪವನ್ನು ಇದು ತಾಳುವದು. ಹಿಂಸೆ ಮತ್ತು ಹೊಟ್ಟೆಕಿಚ್ಚು ಮಾಯವಾಗಲಾರದು.

ಇದು ನಿರ್ಮೂಲವಾಗಬೇಕೆಂದು ನಮ್ಮ ಇಚ್ಛೆ ಇದ್ದರೆ ಹಳ್ಳೀಯವರ ಎರಡು ಮುಖ್ಯ ಅವಶ್ಯಕತೆಗಳಾದ ಶಾರೀರಿಕ ಶ್ರಮ ಮತ್ತು ಪರಿಗ್ರಹ ತತ್ವಗಳನ್ನು ತಿಳಿದುಕೊಳ್ಳಲಿಕ್ಕೆ ಬೇಕು. ಪ್ರತಿಯೊಬ್ಬನು ಶಾರೀರಿಕ ಶ್ರಮದಲ್ಲಿ ಭಾಗ ವಹಿಸಿ ತನ್ನ ಸೊತ್ತನ್ನು ಪರಿಮಿತಗೊಳಿಸಲಿಕ್ಕೆ ಬೇಕು.

— ಗು. ಕೇ. ಫುಟಾಣೆ

ರೂಪಕರಂಗ

# ಚಿತ್ರ ವರ್ಗೀಕರಣ

ಆ ೧ ಡಿ.೨೦ಯೊಳಗವಲ್ಲಿ ಚಲಚಿತ್ರಗಳಲ್ಲಿ
ವರ್ಷ ವಯಸ್ಸಿನೊಳಗಿನವರು ನೋಡ
ದ ಚಿತ್ರಗಳು ಮತ್ತು ಎಲ್ಲರೂ ನೋಡ
ಬಹುದ ಚಿತ್ರಗಳು ಎಂದು ವಿಂಗಡಿಸಲು
ಪರೀಕ್ಷಕ ಸಮಿತಿಗೆ ಅಧಿಕಾರ ಕೊಡ
ವ ಮಸೂದೆಯನ್ನು ಕೇಂದ್ರದ ಮಂತ್ರಿ
ಆಕಾಶವಾಣಿಗಳ ಮಂತ್ರಿಗಳಾದ
ದಿವಾಕರರು ಸಭೆಯ ಮುಂದಿಟ್ಟರು.
ಯಲ್ಲಿ ಶ್ರೀ ಮಹಾವೀರ. ತ್ಯಾಗಿಗಳು,
ತಂದೆಯು ಮಕ್ಕಳನ್ನು ಬಿಟ್ಟು ಸಿನೆ
ಹೋಗಬಾರದು; ಹೀಗೆ ವರ್ಗೀಕರಣ
ಬದಲಿಗೆ ಉತ್ತಮ ಚಿತ್ರಗಳನ್ನೇ
ತಯಿಸಲು ಯತ್ನಿಸಬೇಕು, ಎಂದರು.
ಲಕ್ಷ್ಮೀನಾರಾಯಣರು, ೨೦ ವರ್ಷ ವಯ
ಗಂಡಸು ೧೫ ವರ್ಷ ವಯಸ್ಸಿನ ಹೆಂಡತಿ
ಸಿನೆಮಕ್ಕೆ ಕರೆದೊಯ್ದರೆ ಅವಳನ್ನು
ತಡೆಯಬೇಕೆ? ಎಂದು ಕೇಳಿ
. ಪ್ರೊ. ರಂಗಾ ಅವರು, ೧೫-೧೮ ವರ್ಷ
ಸ್ಸಿನವರನ್ನು ಗುರುತಿಸುವುದು ಹೇಗೆ?
ಪ್ರಶ್ನಿಸಿದರು. ಶ್ರೀ ಪಂಜಾಬರಾವ್
ಮುಖರು ಈ ಕಾಯದೆಯಿಂದ ಸಿನೆಮ
ಕ್ಕೆ ಹಾನಿಯುಂಟಾಗುವುದಲ್ಲದೆ
ಗರು ಮತ್ತು ಸಿನೆಮಚಾಲಕರ ಮೇಲೆ
ಕ ವಿಧದ ಹುಡುಗಾಟಿಕೆಯ ಖಟ್ಲೆಗಳು
ಸಂಭವವಾಗುವವು ಎಂದರು.

ಶ್ರೀ ದಿವಾಕರರು ಉತ್ತರಕೊಡುತ್ತ, ಅಧು
ನಾಗರಿಕತೆ ಮತ್ತು ವಿಚಾರ ಪ್ರಚಾರದ
ರ್ಗಗಳು ನಮ್ಮ ಪ್ರಾಚೀನ ಸಂಸ್ಕೃತಿಯ
ಸಾತ್ವಿಕಧ್ಯೇಯಗಳಿಂದ ಭಿನ್ನವಾಗಿವೆಯೆಂದು
ಗ್ರಹಿಸುವದೆಂದೂ ಸದ್ಯ ಸಭೆಯ ಮುಂದಿ
ದು 'ನೀತಿ' ಸ್ವರೂಪದ ಮಸೂದೆಯೆಂದೂ
ನ್ನೆಯ ಬಗ್ಗೆ ಕೂಲಂಕಷ ವಿಚಾರಣೆ
ದ ಬಳಿಕ 'ಇತಿ' ಸ್ವರೂಪದ ಕಾಯದೆ
ವದೆಂದೂ ಹೇಳಿದರು.

ಪ್ರಾಂತಿಕ ಸರಕಾರಗಳ ಮತ್ತು ಚಲ
ತ್ರದ ಉದ್ಯಮಿಗಳ ಸಲಹೆ ಕೇಳಿಕೊಂಡೇ
ಮಸೂದೆಯನ್ನು ಸಿದ್ಧಪಡಿಸಲಾಗಿದೆ
ಂದು ಶ್ರೀ ದಿವಾಕರರು ಹೇಳಿದ್ದೇನೋ
ಯವಾಗಿದೆ. ಆದರೆ ಮೇಲೆ ಅವರೇ ಹೇಳಿ
ತೆ ಆಧುನಿಕ ವಿಚಾರಪ್ರಚಾರ ನಮ್ಮ
ಪ್ರ ಸಂಸ್ಕೃತಿಯ ಉದಾತ್ತ ಧ್ಯೇಯಗಳಿಗೆ
ದ್ಧವಾಗಿರುವಾಗ ಆ ವಿರೋಧವನ್ನು
ಮತ್ತು ಪ್ರಪಂಚದಲ್ಲಿ ಕಿತ್ತೊಗೆಯುವ ಪ್ರಯತ್ನ
ಮಾಡುವದು ಭಾರತದ ಹಿತಾ
ಗಳ ವಿಚಾರವನ್ನು ಚೆನ್ನಾಗಿ ಬಲ್ಲ
ಪಾತ್ರ ಸಂಸ್ಕೃತಿಸಂಪನ್ನರ ಕರ್ತವ್ಯ
ವದರಲ್ಲಿ ಭಿನ್ನಾಭಿಪ್ರಾಯವಿರಬಲ್ಲುದೇ?
ಯಸಲ್ಲಿ ಬೇರೆ ಬೇರೆ ಸದಸ್ಯರು ಹೊರಗೆಡ
ಸಿದ ಅಭಿಪ್ರಾಯಗಳನ್ನು ಅವಲೋಕಿಸಿದರೆ
ಈ ಕಾಯದೆಯನ್ನು ಮಾಡುವುದರಲ್ಲಿ
ಅದರ ಸೌಲಭ್ಯವು ಅಮಲಿನಲ್ಲಿ ತರುವುದರಲ್ಲಿ
ಅನುಭವಕ್ಕೆ ಬರಲಾರದು ಎಂಬುದೂ ವ್ಯವ
ಹಾರಜ್ಞರಿಗೆ ತಿಳಿಯದ ಮಾತಲ್ಲ. ಆದರೆ
ಚಿತ್ರಗಳು 'ಇತಿ' ಸ್ವರೂಪದ ಕಾಯದೆ ವಿಚಾ
ರವಾದ ಬಳಿಕ ಬರುವದೆಂದಿರುವುದರಿಂದ
ಸದ್ಯ ನೀತಿಯುಕ್ತವಾದ ವಿಚಾರಗಳನ್ನು
ತೋರಿಸುವ ಸಂಭವ ಹಿಡಿಯೆಂಬುದು ಅಶಾ
ದಾಯಕವೆನಿಸಿದೆ. ಆದುದರಿಂದ ಜನತೆ ಈ
ಕೂಲಂಕಷ ವಿಮರ್ಶೆ ಮಾಡಿ ತನ್ನ
ಹಿತಗಳ ದೃಷ್ಟಿಯಿಂದ, ಯುಕ್ತಾಯುಕ್ತ
ವನ್ನು ಪ್ರಾಯಸ್ಥ ಅಪ್ರಾಯಸ್ಥರಲ್ಲಿ
ತೋರುವ ಶಕ್ತಿವು ವಾಸ್ತವವೋ ಅಥವಾ ಸ್ತ್ರೀ
ಪುರುಷ ಬಾಲವೃದ್ಧಾದಿ ಸರ್ವಗ್ರಾಹ್ಯ ರೀತಿ
ಯ ನಮ್ಮ ಕಲೆ ಮತ್ತು ಸಂಸ್ಕೃತಿಯನ್ನು
ಸಿಕೊಳ್ಳುವುದು ಮಾನ್ಯವೋ ಎಂಬುದನ್ನು
ಯಿಸಬೇಕು. ಏಕೆಂದರೆ, ವಯೋವೃದ್ಧ
ರು ಜ್ಞಾನವೃದ್ಧರೆನಿಸುವವರು ಮತ್ತು ಬಾಲ
ನುಳ್ಳವರು ದುರಾಸಕ್ತಿ ಬೆಳೆಸಿಕೊಂಬ
ರು ಎನ್ನಲಾಗದು. ಅಲ್ಲದೆ ಮಾನಸ
ಶಾಸ್ತ್ರದ ದೃಷ್ಟಿಯಿಂದ ವಿಚಾರಮಾಡಿದರೆ, ವ್ಯಕ್ತಿ
ಮತ್ತು ಸಾಮಾಜಿಕ ಅಂಶಗಳನ್ನು ಅವಲೋ
ಕಿಸಿದರೆ ಈ ಜೀವ ಮತ್ಸ್ಯನ್ಯಾಯಕಾರಿ ಎಂಬು
ಸನ್ನಿ ಇರುವ ಸಿನೆಮ ಮುಂತಾದ
ಗಳಲ್ಲಿ ಪುರುಷಾಧಮರ ನಿರ್ದಯ, ಭಾವನಾ
ಕ್ಕೆ ಪ್ರಾಧಾನ್ಯವಿದೆಯಲ್ಲವೆ ಸ್ತ್ರೀಯರ
ಮಾನಹಾನಿ, ಅಭಿರುಚಿಗಳನ್ನು ಲಕ್ಷ್ಯ
ದೃಷ್ಟಿ ಸುಂದರವಿದೆ ಎಂಬುದು ತಿಳಿದು
ತ್ತದೆ. ಆದರಲ್ಲಿಯೂ ಸರ್ವಪ್ರಿಯವಾದ,
ಎಲ್ಲೆಲ್ಲೂ ಕಂಡು ಬರುವ ಶೃಂಗಾರ ಮತ್ತು
ವೀರರಸ ಸನ್ನಿವೇಶಗಳ ಅಂಗಿಕ, ವಾಚಿಕ
ಮತ್ತು ಆಹಾರ್ಯರೂಪದ ತ್ರಿವಿಧಾಭಿನಯದಲ್ಲಿ
ಬುದ್ಧಿಭಾವನೆಗಳ ಶುದ್ಧಿ, ಸಾತ್ವಿಕತೆ ಇವುಗಳ
ಬಗ್ಗೆ ಲಕ್ಷ್ಯವೀಯುವ ಸಂಪ್ರದಾಯ ಬೆಳೆದು
ಬರದಿರುವುದು ಸ್ತ್ರೀ ಪುರುಷರಿಬ್ಬರ ಸಾಮಾ
ಜಿಕ ಮತ್ತು ನೈತಿಕ ವ್ಯಕ್ತಿತ್ವಗಳ ಪೋಷಣೆಗೆ
ವಿಘ್ನಕಾರಿಯಾಗಿದೆ ಎಂಬುದನ್ನು ಸೂಕ್ಷ್ಮ
ವಿಚಾರ ಮಾಡಿದರೆ ತಿಳಿಯಬಹುದು. ಸಾಮಾ
ಜಿಕರಲ್ಲಿ ಸ್ತ್ರೀ, ಪುರುಷ, ಬಾಲರೆಂಬ ತ್ರಿವರ್ಗ
ಮಾಡಿಕೊಂಡು ವಿಶಿಷ್ಟ ವರ್ಗಕ್ಕೆ ತೃಪ್ತಿಪಡಿಸ
ಬೇಕೆಂಬ ದೃಷ್ಟಿಯಿಂದ ಕಲಾಕೃತಿ ರಚಿತ
ವಾದರೆ ಕುಟುಂಬ ಮತ್ತು ಸಾರ್ವಜನಿಕ ಜೀವ
ನದಲ್ಲಿರಬೇಕಾದ ಸಾಮರಸ್ಯ ಬುದ್ಧಿಯನ್ನು
ಅದು ಕೆಡಿಸುತ್ತದೆ. ಒಬ್ಬರಿಗೆ ಶೃಂಗಾರವೆಂದು
ಪ್ರೇಮಲೀಲೆಯೆಂದು ತೋರಿದ್ದು ಇನ್ನೊಬ್ಬ
ರಿಗೆ ಅಶ್ಲೀಲ, ಅಸಹ್ಯ ಎಂದು ತೋರುವಂತೆ
ವೈವಿಧ್ಯವನ್ನು ಕಲೆಯಲ್ಲಿ ಮೂಡಿಸುವದು
ಭೇದಬುದ್ಧಿಯನ್ನೂ ಪಾಪಬುದ್ಧಿಯನ್ನೂ
ಕಪಟಬುದ್ಧಿಯನ್ನೂ ಆಬಾಲವೃದ್ಧ
ಸ್ತ್ರೀ ಪುರುಷರಲ್ಲಿ ಪರಸ್ಪರರ ಬಗೆಗೆ ಬೆಳೆಸಲು
ಎಡೆಗೊಡುತ್ತದೆ. ಇದು ಸರ್ವಥಾ ಅನ್ಯಾಯ,
ದ್ರೋಹ, ಸಂಸ್ಕೃತ ಜೀವನಕ್ಕೆ ಕಲಂಕ ತರು
ವಂಥದು.

ವೀರತ್ವ ಕ್ರೂರತ್ವಗಳಲ್ಲಿ, ಶೃಂಗಾರಬೀಭತ್ಸ
ಗಳಲ್ಲಿ ಭೇದವನ್ನು ತೋರಿಸುವ ಸೂಕ್ಷ್ಮ ಕಲೆ
ಗಾರಿಕೆ ಇಂದಿನ ನಮ್ಮ ಚಲಚ್ಚಿತ್ರಕಾರರಲ್ಲಿ
ದುರ್ಲಭವಾಗಿದೆ. ಅದ್ಭುತ ಚಿತ್ರಗಳಲ್ಲಿ ಕಳ್ಳ
ತನ ಮತ್ತು ಕೊಲೆಗಳು ನಿಂದ್ಯವೆಂಬುದನ್ನು
ಅಂತ್ಯದಲ್ಲಿ ತೋರಿಸಿದರೂ ಮಧ್ಯದಲ್ಲಿ ಅಂಥ
ವನ್ನು ಮಾಡುವ ಪಾತ್ರಗಳು ಆಕರ್ಷಣೀಯ
ವಾಗಿ ಚಿತ್ರಿತವಾಗಿರುವುದರಿಂದ, ಪರಿಣಾಮ
ದಲ್ಲಿ ಅಪ್ರಬುದ್ಧ ಪ್ರೇಕ್ಷಕರ ಬುದ್ಧಿ ಅಯೋಗ್ಯ
ಮಾರ್ಗ ಹಿಡಿವ ಅಂಜಿಕೆ ಇರುವುದು. "ಫಿಲ್ಮ್"
ಪುಸ್ತಕದಲ್ಲಿ ಶ್ರೀ ರೋಜರ್ ಮ್ಯಾನ್ವೆಲ್ಲರು
ಹೇಳಿರುವಂತೆ ಇಂದಿನ ಶೃಂಗಾರ ಚಿತ್ರಗಳ
ದರ್ಶನದಿಂದ ಹುಡುಗಿ ಹುಡುಗರನ್ನು ಆಕ
ರ್ಷಿಸಿ ಮೋಸದಿಂದ ಅವರನ್ನು ಬಲೆಗೆಳೆದು
ಕೊಳ್ಳಲು ಮಾಡಬೇಕಾದ ಅಲಂಕಾರ ಚಮ
ತ್ಕಾರಗಳನ್ನೂ ಹುಡುಗನು ಹುಡುಗಿಯರ
ಅಂಥ ವಿಕಾರಗಳಿಂದ ಅಧಾರ್ಮಿಕ ಕಾಮೋ
ತ್ತೇಜನ ಹೊಂದುವುದನ್ನೂ ಕಲಿತು ಬರುತ್ತಾರೆ
ಎಂಬುದು ನಮ್ಮ ನಿತ್ಯದ ಅನುಭವ. ಇದರಿಂದ
ಹುಡುಗಿಯರು ಅಪ್ರಯೋಜಕರೂ ವಂಚ
ಕರೂ ಆಗುವ ಸಂಭವ ಹೆಚ್ಚಾಗುವಂತೆ ಹುಡು
ಗರು ಮೋಹಾಂಧರೂ ಮುಂದಾಳ್ತರೂ ಆಗುವ
ಸಂಭವ ಉಂಟಾಗುತ್ತದೆ. ಇದರಿಂದ ಸ್ತ್ರೀ
ಪುರುಷರಿಬ್ಬರ ಪ್ರೌಢ ಸಂಸ್ಕೃತ ಜೀವನದ
ಸರಣಿಗೂ ಕಂಟಕ ಬರುತ್ತದೆ. ಇದು ಇಂದು
ನಿನ್ನೆಯ ಮಾತಲ್ಲ. ನಮ್ಮ ಪ್ರಾಚೀನ ಪರಂ
ಪರೆಯ ಸಾಹಿತ್ಯಾದಿ ಕಲೆಗಳಿಂದಲೂ ಇಂಥ
ಅನ್ಯಾಯ ಸಂಭವಿಸಿದೆ. ಸ್ತ್ರೀಗೆ ಪುರುಷರಂತೆ
ಸಾಮಾನ್ಯ ಮತ್ತು ಪ್ರೌಢ ಜ್ಞಾನ ಕೊಡುವ
ಶಿಕ್ಷಣ ದುರ್ಲಭವಾಗಿ ಅವಳು ಅತಿಸ್ತುತಿ, ಅತಿ
ನಿಂದೆ ಮತ್ತು ಅಂತ್ಯದಲ್ಲಿ ಅತಿತಿರಸ್ಕಾರಕ್ಕೆ
ತುತ್ತಾದುದಕ್ಕೆ ಮಹರ್ಷಿಗಳ, ಕವಿಗಳ
ಮತ್ತು ತತ್ವಜ್ಞರ ವಾಕ್ಯಗಳ ಆಧಾರ ಸಾವಿ
ರಾರು ಸಿಕ್ಕುತ್ತವೆ. ಇನ್ನಾದರೂ ಇಂಥ ದೃಷ್ಟಿ
ನಮ್ಮ ಅಭಿನಯ, ನರ್ತನ, ಚಿತ್ರ ಮತ್ತು
ಮೂರ್ತಿಶಿಲ್ಪಗಳಲ್ಲಿ ಮೂಡದಂತೆ ನೋಡಿ
ಕೊಳ್ಳುವುದು ಸ್ತ್ರೀ ಪುರುಷರಿಬ್ಬರ ಸಮ್ಯಗ್
ಜೀವನದ ದೃಷ್ಟಿಯಿಂದ ಅವಶ್ಯಕವಲ್ಲವೆ?

ಬಾಲ ಪ್ರೌಢರಿಬ್ಬರೂ ಒಂದು ಸಮಾಜದ,
ಕುಟುಂಬದ ಅನೇಕ ಸಮಾರಂಭಗಳಲ್ಲಿ ಪ್ರವೇ
ಶಿಸುತ್ತಾರೆ. ಅಲ್ಲಿ ಅವರ ಬುದ್ಧಿ ನಿರ್ಮಲ
ವಾಗಿ ಉಳಿಯಬೇಕಾದರೆ ಯಾವ ಶೃಂಗಾರ-
ವೀರ ನಡತೆಗಳು ಅವಶ್ಯಕವೋ ಅವುಗಳ ಗಡಿ
ಯನ್ನು ಚಲಚ್ಚಿತ್ರಗಳು ಮೀರುವುದು ಸಮಾ
ಜಕ್ಕೆ ದ್ರೋಹ ಮಾಡಿದಂತಾಗುತ್ತದೆ. ಸರಳತೆ,
ಸೌಹಾರ್ದ, ಸಾತ್ವಿಕತೆ, ನಿರ್ವಂಚನೆ,
ಪಾವಿತ್ರ್ಯ ಮತ್ತು ಪ್ರಾಮಾಣಿಕತೆಗಳು
ಏಕಾಂತದ ದೃಶ್ಯದಲ್ಲೂ ಮೂಡಿಸಲು ಬರು
ತ್ತದೆ. ಹಾಗೆ ಮೂಡಿಸಿದ್ದು ಮಾತ್ರ "ಸರ್ವ
ರಸಗಳೂ ಸತ್ಯಜನ್ಯ" ಎಂಬ ನಮ್ಮ ಹಿರಿಯರ
ಮಾತಿನಂತೆ ನಿಜಕಳೆಯನ್ನೀಸುವುದು. ಶೈಕ್ಷಣಿಕ
ಮೌಲ್ಯವುಳ್ಳವಾಗಿರುವುದರಿಂದ ಚಲಚ್ಚಿತ್ರ
ಗಳೆಲ್ಲವುಗಳಲ್ಲೂ ಇದನ್ನು ಮರೆಯಕೂಡದು.

— ಬಿ. ಎಚ್. ಶ್ರೀಧರ

ವಿಶೇಷ ಲೇಖ

# ಬ್ರಿಟಿಶ್ ಕಾಮನ್‌ವೆಲ್ತಿನ

ಭಾರತ ವರ್ಷ ನಾಳೆ ಹೊಸ ರಾಜ್ಯಘಟನೆ
ಯಾದೊಡನೆ ಸರ್ವತಂತ್ರ ಸ್ವತಂತ್ರ
ಪ್ರಜಾರಾಜ್ಯವಾಗುವದೇ ನಿಶ್ಚಿತವಾದರೂ
ಬ್ರಿಟಿಶ ರಾಷ್ಟ್ರಕೂಟದೊಡನೆ ಒಂದಲ್ಲ
ಒಂದು ಬಗೆಯ ಸಂಬಂಧವನ್ನಿಟ್ಟುಕೊಳ್ಳು
ವದು ಹಿತಾವಹವಾದೀತೆಂದು ನಮ್ಮ
ಮುಖ್ಯಮಂತ್ರಿ ಪಂ. ಜವಾಹರಲಾಲರು
ಕಳೆದ ವಾರ ಸಾರಿದರು. ಈ ಸಂಬಂಧ
ಯಾವ ಬಗೆಯದಿರಬೇಕೆಂಬ ನಿರ್ಣಯ
ಇನ್ನೂ ಆಗಿಲ್ಲ. ಬ್ರಿಟಿಶ ಅರಸೊತ್ತಿಗೆಗೆ ಔಪ
ಚಾರಿಕ ಅಧೀನತ್ವವನ್ನು ಒಪ್ಪಿಕೊಳ್ಳದೆ
ಗಣರಾಜ್ಯವಾಗುವ ರಾಷ್ಟ್ರದೊಡಳಗೆ ಒಂದು
ಕೂಟವಾಗುವದಾದರೆ ಅದು ಯಾವ ರೂಪ
ದ್ದಿರಬೇಕೆಂಬ ಬಗ್ಗೆ ಈ ವರೆಗಿನ ಇತಿಹಾಸ
ದಲ್ಲಿ ಪೂರ್ವರೂಢಿಯ ಆಧಾರವಿಲ್ಲದ್ದರಿಂದ

ಬ್ರಿಟಿಶ ಮುಖ್ಯ ಮಂತ್ರಿ
**ಏನು ಹೊಸ ಉಪಾಯ?**

ಮೇ ತಿಂಗಳಲ್ಲಿ ಜರಗಲಿರುವ ರಾಷ್ಟ್ರಕೂಟ
ಮುಖ್ಯಮಂತ್ರಿಗಳ ಲಂಡನ್ ಪರಿಷತ್ತು
ಒಂದು ಹೊಸ ಪರಂಪರೆಯನ್ನು ನಿರ್ದೇಶಿಸ
ಬಹುದೆಂದು ನಂಬಲಾಗಿದೆ. ಆದರಲ್ಲಿ ನಮ್ಮ
ಮುಖ್ಯಮಂತ್ರಿಗಳೂ ಭಾಗವಹಿಸಲಿರುವ
ಕಾರಣ, ಭಾರತದ ಸ್ವಾತಂತ್ರ್ಯ ಮತ್ತು
ಸ್ವತಂತ್ರ ವಿದೇಶ ಧೋರಣಕ್ಕೆ ಆತಂಕ ಬಾರ
ದಂತೆ ಹೊಸ ಸಂಬಂಧದ ರೂಪರೇಷೆಯನ್ನು
ನಿರ್ಮಿಸಬಹುದೆಂದು ನಿರೀಕ್ಷಿಸಬಹುದು.

ಬ್ರಿಟಿಶ ಅರಸೊತ್ತಿಗೆಗೆ ವಿಧೇಯರಾಗಿರದೆ
ಭಾರತೀಯರು ಬ್ರಿಟಿಶ ರಾಷ್ಟ್ರಕೂಟದಲ್ಲಿ
ಉಳಿಯಲಾರರೆಂದು ಮೊನ್ನೆ ಜನರಲ್
ಸ್ಮಟ್ಸರು ಹರಿಹಾಯ್ದರು. ಗಣರಾಜ್ಯವಾದರೆ
ಬ್ರಿಟಿಶ ಕೂಟ ಭಾರತವನ್ನು ಪರರಾಷ್ಟ್ರ
ವೆಂದೇ ಭಾವಿಸುವದು ಎಂದವರು ಅಬ್ಬರಿಸಿ
ದ್ದಾರೆ. ನಮ್ಮ ರಾಷ್ಟ್ರದ ಇಂದಿನ ನಾಯಕರು
ಸ್ಮಟ್ಸರಿಗಿಂತ ಪ್ರಬಲರಾದವರ ಇದಕ್ಕಿಂತ
ಉಗ್ರವಾದ ಬೆದರಿಕೆಗಳನ್ನು ಮಾಜದೆ
ಅಂಜದೆ ಎದುರಿಸಿದವರಾದ್ದರಿಂದ ಈ ಒಣ
ಹೆಮ್ಮೆಯ ಮಾತುಗಳಿಗೆ ಎಷ್ಟು ಬೆಲೆ ಕೊಡ
ಬೇಕೆಂದು ಅವರಿಗೆ ಗೊತ್ತೇ ಇದೆಯೆನ್ನೋಣ.
ಬ್ರಿಟಿಶ ರಾಷ್ಟ್ರಕೂಟದೊಡನೆ ಯಾರದೇ
ಜಂಬದ ಕಾರಣದಿಂದ ಭಾರತದ ಸಂಪರ್ಕ
ತಪ್ಪಿದರೆ ಅದರಿಂದ ಭಾರತಕ್ಕಾಗುವ ಹಾನಿ
ಗಿಂತ ಇನ್ನೊಂದು ಪಕ್ಷಕ್ಕಾಗುವದು ಕಡಿಮೆ
ಯಲ್ಲವೆಂದು ಸ್ಮಟ್ಸರಿಗೂ ಗೊತ್ತಿದ್ದೀತು.

## ಜೀವಂತ ಘಟಕ

ಆದರೆ ಅಂಥ ಪ್ರಸಂಗ ಬರುವ ಕಾರಣ
ವಿಲ್ಲೆಂದು ಇತಿಹಾಸದ ಪರಿಶೀಲನೆಯಿಂದ
ಸ್ಪಷ್ಟವಾಗುತ್ತದೆ. ಬ್ರಿಟಿಶ ರಾಷ್ಟ್ರಕೂಟ
ಅಥವಾ ಕಾಮನ್‌ವೆಲ್ತ್ ಎಂಬೀ ಅಂತರ್-
ರಾಷ್ಟ್ರೀಯ ಸಂಸ್ಥೆ ಜಡವಾದ ಘಟಕವಾಗಿ
ರದೆ ಎರಡು ಶತಮಾನಗಳಿಂದ ಬೆಳೆದು
ರೂಪಾಂತರಗೊಂಡು ಬಂದ ಜೀವಂತ ಘಟಕ
ವಾಗಿದೆ. ಮೂಲ ರಾಷ್ಟ್ರಕ್ಕೂ ಸದಸ್ಯ ರಾಷ್ಟ್ರ
ಗಳಿಗೂ ಇರುವ ಸಂಬಂಧ ಇಂದಿನಂತೆ ಹಿಂದ
ಇದ್ದಿಲ್ಲ.

ಬ್ರಿಟಿಶ ವಸಾಹತುಗಳ ಇತಿಹಾಸವನ್ನ
ಅವಲೋಕಿಸಿದರೆ, ಅದು ಸ್ವ-ರಾಜ್ಯದ
ಒಂದು ದೀರ್ಘ ಹೋರಾಟವೆಂದು ಗೊತ್ತಾ
ಗುವದು. ಕೆಲವು ಪ್ರಸಂಗಗಳಲ್ಲಿ ವಸಾಹತು
ಪ್ರಜೆಗಳ ವರ್ಣವನ್ನಾಧರಿಸಿ ಅವರ ಬೇಡಿಕೆ
ಗಳಿಗೆ ಮನ್ನಣೆ ಕೊಡುವುದರಲ್ಲಿ ಬ್ರಿಟಿಶರು
ಅಷ್ಟಿಷ್ಟು ಪಕ್ಷಪಾತ ಮಾಡಿರಬಹುದಾದರೂ
ಈ ಹೋರಾಟವು ವರ್ಣಭೇದದಿಂದ ಸ್ವರೂಪ
ಭೇದ ಹೊಂದಿದ್ದು ಇಲ್ಲವೆಂದೇ ಹೇಳ
ಬಹುದು: ರಾಜಕೀಯ ಬುದ್ಧಿ ಜಾಗ್ರತಿಯಾ
ದೊಡನೆ ವಸಾಹತು ಪ್ರಜೆಗಳು ಸ್ವ-ರಾಜ್ಯ
ಕ್ಕಾಗಿ ಹಾತೊರೆದು ಹುಯಿಲೆಬ್ಬಿಸಿದ್ದೇ
ಎಲ್ಲೆಲ್ಲಿಯೂ ಕಾಣಿಸುತ್ತದೆ. ಯಾವುದೇ
ಉದ್ದೇಶದಿಂದ ಸಾಮ್ರಾಜ್ಯವಾದಿಗಳು ಪ್ರಜೆ
ಗಳಿಗೆ ಶಿಕ್ಷಣ ಕೊಟ್ಟೊಡನೆ ಅವರು ಹೆಚ್ಚು
ವಾಚಾಲರಾಗಿ ತಮ್ಮ ಮನೆಯ ಯಾಜ
ಮಾನ್ಯ ತಮಗೇ ಏಕೆ ಬೇಡವೆಂದು ಕೇಳ
ತೊಡಗಿದರು.

## ಹದಿನೆಂಟನೇ ಶತಮಾನದ ಪಾಠ

ಮೊದಮೊದಲು ಬ್ರಿಟಿಶ ಸಾಮ್ರಾಜ್ಯ
ವಾದಿಗಳು ಇದನ್ನು ತಿಳಿದುಕೊಳ್ಳಲೇ ಇಲ್ಲ.
ಹದಿನೆಂಟನೆ ಶತಮಾನದಲ್ಲಿ ಅಮೇರಿಕೆಯ
ವಸಾಹತುಗಳು ದಂಗೆಯೇಳಬಹುದೆಂದು
ಯಾರೂ ನಂಬಿರಲಿಲ್ಲ. ಪ್ರಾತಿನಿಧ್ಯ ಕೊಡದೇ
ಕರವನ್ನು ಎತ್ತುತ್ತಲೇ ಸಾಗಬಹುದೆಂದು
ಅವರು ಬಗೆದಿದ್ದರು. ಎಡ್ಮಂಡ್‌ಬರ್ಕ್
ಮತ್ತು ಪಿಟ್ಟರಂಥವರು ಇದಕ್ಕೆ ಅಪವಾದ
ಪ್ರಾಯರಾಗಿದ್ದರೂ ಉಳಿದವರು ಈ
ಅನ್ಯಾಯ ಒಂದು ದಿನ ಅಸಹ್ಯವಾಗಬಹು
ದೆಂದು ಮನಗಾಣಲಿಲ್ಲ. ೧೭೭೬ ರಲ್ಲಿ ಅಮೇ
ರಿಕೆಯ ಹದಿಮೂರು ವಸಾಹತುಗಳು
ಸ್ವಾತಂತ್ರ್ಯ ಸಾರಿ ಮೂರನೆ ಜಾರ್ಜನ
ಸೇನಾಪತಿಗಳನ್ನು ಸೋಲಿಸಿದಾಗಲೇ ಅವ
ರಿಗೆ ಬುದ್ಧಿ ಬಂತು.

ಹತ್ತೊಂಭತ್ತನೆ ಶತಮಾನದ ಉದ್ದಕ್ಕೂ
ಬ್ರಿಟಿಶರ ಬಳಿ ವಸಾಹತುಗಳಾದ ಕೆನಡಾ,
ಆಸ್ಟ್ರೇಲಿಯಾ, ನ್ಯೂಝಿಲಂಡ, ದಕ್ಷಿಣ
ಆಫ್ರಿಕೆಗಳಲ್ಲಿ ಸ್ವಾತಂತ್ರ್ಯಾಪೇಕ್ಷೆ ಹೆಚ್ಚುತ್ತ
ಬಂದದ್ದು ಕಾಣುತ್ತದೆ. ಕೆನಡಾಕ್ಕೆ ೧೭೯೧
ರಿಂದಲೇ ಒಂದು ಪ್ರತಿನಿಧಿಸಭೆಯಿದ್ದಿತಾ
ದರೂ ಬ್ರಿಟಿಶ ಸರಕಾರದಿಂದ ನೇಮಕ
ಹೊಂದಿದ ಆಡಳಿತೆಗಾರರೇ ನಿಜವಾದ ಅಧಿ
ಕಾರವನ್ನು ನಡೆಸುತ್ತಿದ್ದರು. ಈ ಕಾರಣ
ದಿಂದಲೂ ಕೆನಡಾದ ಬ್ರಿಟಿಶ ಮತ್ತು
ಫ್ರೆಂಚ್ ಮೂಲದ ಪ್ರಜೆಗಳೊಳಗಿನ ವೈಷ
ಮ್ಯಗಳಿಂದಲೂ ಪರಿಸ್ಥಿತಿ ವಿಕೋಪಕ್ಕೆ
ಹೋಗಿ ೧೮೩೭ ರಲ್ಲಿ "ಬ್ರಿಟಿಶ ದಬ್ಬಾಳಿಕೆ"
ಯ ವಿರುದ್ಧ ದಂಗೆಗಳೆದ್ದವು.

ಇದಾದನಂತರ ಪಾರ್ಲಮೆಂಟು ಅಲ್ಲಿಗೆ
ಕಳಿಸಿದ ಬ್ರಿಟಿಶ ವೈಶಿಷ್ಟ್ಯವೆನಿಸಿದ "ವಿಚಾ
ರಣಾ ಸಮಿತಿ" ಯೊಂದು ಮಾಡಿದ ವರ
ದಿಯ ಪರಿಣಾಮವಾಗಿ ಪ್ರಾರಂಭವಾದ
ಹೊಸ ವಸಾಹತು ಸಂಬಂಧದ ಪರಂಪರೆಯೆ
ಮುಂದೆ ಮಾರ್ಗದರ್ಶಕವಾಯಿತು.
"ಮಾತೃ" ದೇಶದ ಸರಕಾರವು ವಸಾಹತು
ಗಳ ಒಳ ಆಡಳಿತದಲ್ಲಿ ಕೈಹಾಕದೆ "ವಿದೇಶ
ಸಂಬಂಧ" ಮತ್ತು ವಿದೇಶ ವ್ಯಾಪಾರದ
ವಿಷಯಗಳನ್ನಷ್ಟೆ ತನ್ನ ಅಂಕೆಯಲ್ಲಿಟ್ಟು
ಕೊಳ್ಳಬೇಕೆಂಬದು ಅರ್ಲ್ ಆಫ್ ಡರ್ಹ್ಯಾಮ
ಸಮಿತಿಯ ವರದಿಯ ಆಶಯವಾಗಿತ್ತು.
ಪ್ರಾತಿನಿಧಿಕ ಸಂಸ್ಕಾರವನ್ನೂ ಹೊಣೆಯಿಲ್ಲದ
ಅಧಿಕಾರವನ್ನೂ ಏಕತ್ರ ಸೇರಿಸುವದ

ಸಾಧ್ಯವೆಂದು
ದುದೇ ವಿಚಿ
ದಿದ್ದರು.

ಆ ವ
ನಮಗೆ ಈಗ
ತೋರಬಹ
ಭಾರಿ
ಮುಂದಿನ
ಉಳಿದ ಬ
ಲಿಯಾ,
ಆಫ್ರಿಕೆಗಳ
ಹತುಗಳಲ್ಲಿ
ದಂತೆ "ವ
ಸಡಿಲಾಗು

ಭಾರ
ಪ್ರಜಾ

ಸ್ವಾ

ಹೀಗೆ
ಕೊಟ್ಟ ಕ
ಇದ್ದ
ದಿಂದಲೊ
ಹೋದವು
ಶಾಖೆ ಯ
ಅದರಿಂದ
ಹತುಗಳ
ಯೆಂದು
ಹೇಗೋ
ದೆಸೆಯಿಂ
ಅಪಾಯ
ಯಲ್ಲಿ ಬ
ಆರಂಭದ
ಡ್ಡರ
ಮನ್ನಿಸಲ
ವೈಷಮ್ಯ
ದರೆ ಅಂ
ಹೋರಾ
ಬ್ರಿಟಿಶ
ಬಿಟ್ಟದ್ದಾ
ವಸಾ
ವಾಗಿಯೆ
ವೆಸ್ಟ್‌ವಿ
ವಿದೇಶ
ಸ್ವತಂತ್ರ
ವಸಾಹ
ದ್ದಕ್ಕೆ ಸ

ಇಪ್ಪ
ಕ್ಷೇತ್ರ
ಕಡಿಮೆ
ಬಂದಿದೆ.
ತುಸು ಮ

# ...ಳವಣಿಗೆ ಮತ್ತು ಭವಿತವ್ಯ

ಲೇಖಕರು : "ಸಂಪಾತಿ"

...ಜಕಾರಣಿಗಳು ಬಗೆ
...ರ್‌ಹ್ಯಾಮರು ಬರೆ
...ವಾಯಿತು—
...ಮಾನ್ಯವೆಂದು
...ಲದಲ್ಲಿ ಅದೇ
...ಜ್ಜೆಯಾಗಿತ್ತು.
...ದೇ ಪರಂಪರೆ
...ದ ಆಸ್ಟ್ರೇ
...ಮತ್ತು ದಕ್ಷಿಣ
...ಸ್ವಲ್ಪಟ್ಟಿತು. ವಸಾ
...ತಿ ಹೊಂದಿ
...ನಿಯಂತ್ರಣವೂ

...ತ್ರಿ ನೆಹರೂ
...ಷ್ಟ್ರಕೂಟ ?

**...ತಂತ್ರಶಕ್ತಿ**

...ಗೆ ಸ್ವಾತಂತ್ರ್ಯ
...ಗೂ ಅವುಗಳಿಗೂ
...ಸಗಳು ಮಂತ್ರ
...ಮಾಯವಾಗಿ
...ನ್ನಿನ ವಸಾಹತು
...ೀಡಿಸಲ್ಪಟ್ಟಿತ್ತು.
...ದ ಅದನ್ನು "ವಸಾ
...ಸುವ ಶಾಖೆ"
...ದುಂಟು. ಆದರೆ
ವಸಾಹತುಗಳ
...ಯಾವ ಬಗೆಯ
ದಕ್ಷಿಣ ಆಫ್ರಿಕೆ
...ದ್ದು ಈ ಶತಕದ
...ಳೊಡನೆ ಹೋರಾ
...ವರ ಸ್ವಾತಂತ್ರ್ಯ
...ವು ಅವೆರಡರಲ್ಲಿ
ನಿಜವಾಗಿ ಕೇಳಿ
...ದ ಸೇನೆಯೊಡನೆ
...ಟ್ಸರೇ ಇಂದು
...ಧಾರಸ್ತಂಭವಾಗಿ

...ನ ವಿಕಾಸ ಶಾಂತ
...ಗೆ ೧೯೩೧ ರಲ್ಲಿ
ಮೂಲಕ ಅವು
...ಜೆಗಳಲ್ಲಿ ಕೂಡ
...ಸನದಿನಲ್ಲಿ
...ನ ಮಾತೃದೇಶ
...ಕರಿಸಲ್ಪಟ್ಟಿತು.
...ಲ್ಲಿ
...ದಲ್ಲಿ ಬ್ರಿಟನ್ನಿನ
...ಲ್ಲಿಯೂ ಹೆಚ್ಚು
ವಿಕಾಸ ಕಂಡು
...ಜೆಗಳ ಬೇಡಿಕೆಗೆ
...ಳ ಆಡಳಿತದಲ್ಲಿ

ತಕ್ಕಮಟ್ಟಿನ ಸ್ವಾಯತ್ತತೆಯನ್ನು ಕೊಡಲಾಯಿತು. ಆ ವಸಾಹತುಗಳ ಗವರ್ನರಿಗೆ ವಿಶೇಷಾಧಿಕಾರಗಳು ಕೊಡಲ್ಪಟ್ಟರೂ ಪ್ರತಿಯೊಂದು ವಸಾಹತಿನಲ್ಲಿಯೂ ಒಂದಲ್ಲ ಒಂದು ಬಗೆಯ, ಹೆಚ್ಚು ಕಡಿಮೆ ಅಧಿಕಾರದ, ಶಾಸನ ಸಭೆಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ನೇಮಕ ಹೊಂದಿದ ಸದಸ್ಯರನ್ನು ತುಂಬುವ ಮತ್ತು ಗವರ್ನರನ ಪ್ರತಿಬಂಧಾಧಿಕಾರವೇ ಮೊದಲಾದವುಗಳ ವಿರುದ್ಧ ಹೋರಾಟ ಹೂಡುವ ಹೆಜ್ಜೆ ಆ ಮೇಲಿನದು. ಕೊನೆಗೆ ಇವೆಲ್ಲ ಹೋಗಿ ಪೂರ್ಣ ವಸಾಹತು ಸ್ವರಾಜ್ಯ ದೊರೆತು ಅವು ಸ್ವತಂತ್ರ ರಾಷ್ಟ್ರಗಳಾಗಿ ಎದ್ದು ನಿಂತವು, ನಿಲ್ಲುತ್ತಿವೆ.

ಇವೀಗ ಬ್ರಿಟಿಶ ವಸಾಹತು ಸ್ವರಾಜ್ಯದ ಬೆಳವಣಿಗೆಯ ಅವಸ್ಥೆಗಳು: ಆಂತರಿಕ, ಅಂತರ್‌ರಾಷ್ಟ್ರೀಯ ಹಾಗು ಸ್ವತಃ ಅಧೀನ ಪ್ರಜೆಗಳ ಚಳವಳಿಯ ಸಾಮರ್ಥ್ಯದ ಪರಿಸ್ಥಿತಿಗಳನ್ನು ಅವಲಂಬಿಸಿ ಈ ಬೆಳವಣಿಗೆಯಲ್ಲಿ ಕಾಲದೇಶಾನುಸಾರವಾದ ಗತಿಭೇದವಿದ್ದಿರಬಹುದು. ಮೊದಲನೆ ಮತ್ತು ಎರಡನೆ ಮಹಾಯುದ್ಧಗಳಿಂದ ಈ ಗತಿಗೆ ಅಪೂರ್ವ ರಭಸವೂ ಬಂತು. ಈ ನಡುವೆ ಸಾಮ್ರಾಜ್ಯವಾದಿಗಳ ಸಂಕುಚಿತ ಮನೋವೃತ್ತಿಯ ಫಲವಾಗಿ ಅನೇಕ ವಸಾಹತುಗಳಲ್ಲಿ ಹೆಚ್ಚು ಕಡಿಮೆ ತೀವ್ರತೆಯುಳ್ಳ ಹಿಂಸಾತ್ಮಕ ಚಳವಳಿಗಳೂ ಆಗಿ ಹೋದವು. ಇದಕ್ಕೆ ಯುದ್ಧಾನಂತರದ ಆರ್ಥಿಕ ದುರವಸ್ಥೆಯೂ ಕಾರಣವಾಯಿತು. ಜಪಾನದ ಆಕ್ರಮಣಕ್ಕೊಳಗಾದ ಅಧೀನ ಪ್ರದೇಶಗಳಲ್ಲಿ ಬ್ರಿಟಿಶರು ಹಳೇ ಗರ್ವ—ಗಾಂಭೀರ್ಯಗಳಿಂದ ಮತ್ತೆ ಕಾಲಿಡಲಾರದೆ ಹೋದರು. ಅಂತೂ ಹಿಂದುಸ್ತಾನ ಇಬ್ಭಾಗವಾಗಿಯಾದರೂ ಸ್ವತಂತ್ರವಾಯಿತು. ಬರಿ ವಸಾಹತಾಗಿದ್ದ ಪುಟ್ಟ ಸಿಂಹಳವೂ ಬ್ರಿಟಿಶ ರಾಷ್ಟ್ರಕೂಟದ ಸಮಾನರಾಷ್ಟ್ರವಾಯಿತು. ಬ್ರಹ್ಮದೇಶವಂತೂ ಸಾಮ್ರಾಜ್ಯದಿಂದ ಹೊರಬೀಳಲು ಕೂಡ ಸಮರ್ಥವಾಯಿತು. ಉಳಿದ ಅಧೀನ ದೇಶಗಳನ್ನೂ "ಆದಷ್ಟು ಜಾಗ್ರತೆಯಾಗಿ ಸ್ವರಾಜ್ಯಕ್ಕೆ ಅಣಿ ಮಾಡುವ" ಧ್ಯೇಯವನ್ನು ಬ್ರಿಟಿಶ ಕೂಲಿಕಾರ ಸರಕಾರ ಇಟ್ಟುಕೊಂಡಿದೆ.

## ಭವಿತವ್ಯ

ಈ ಸಿಂಹಾವಲೋಕನದಿಂದ ಏನಾದರೂ ತಿಳಿಯುವಂತಿದ್ದರೆ, ಅದು ಬ್ರಿಟಿಶ ರಾಷ್ಟ್ರಕೂಟವೆಂಬುದೊಂದು ಕಲ್ಲಿನ ಪ್ರತಿಮೆಯಾಗಿರದೆ ಬದಲಾಗುತ್ತಿರುವ ಸಜೀವ ಸಂಸ್ಥೆಯೆಂಬದು. ಆಂತರಿಕ ವಿಷಯಗಳಲ್ಲಿ ಕೂಡ ಸಾಕಷ್ಟು ಅಧಿಕಾರಿಗಳಾಗಿರದಿದ್ದ ವಸಾಹತು ಪ್ರಜೆಗಳಿಗೆ ಇಂದು ಪೂರ್ಣ ಅಂತರ್ಬಾಹ್ಯ ಸ್ವಾತಂತ್ರ್ಯ ದೊರೆತಿದೆ. ಬ್ರಿಟನ್ನಿನ ಪಕ್ಷದಲ್ಲಿ ಯುದ್ಧಕ್ಕಿಳಿಯಬೇಕೆಂಬ ನಿರ್ಬಂಧ ಕೂಡ ಇಂದು ಅವುಗಳ ಮೇಲಿಲ್ಲ. ಸಾಮ್ರಾಜ್ಯಕ್ಕೊಂದು ನಿರ್ದಿಷ್ಟ ಘಟನೆ ಕೂಡ ಇಲ್ಲ. ಅದು ತುಂಬ ವಿಕಾಸಶೀಲವಾದುದು. ಈಗಿರುವ ಒಂದೇ ಒಂದು ಸಾಮಾನ್ಯ ವೈಶಿಷ್ಟ್ಯವೆಂದರೆ, ಬ್ರಿಟಿಷ ಅರಸೊತ್ತಿಗೆಗೆ ಎಲ್ಲರ ವಿಧೇಯತೆ. ಅದೂ ಬರಿ ಹೆಸರಿಗೆ ಮಾತ್ರ. ಪಂ. ಜವಾಹರಲಾಲ ನೆಹರೂ ಅವರು ಹೇಳಿದಂತೆ, ಗವರ್ನರ್ ಜನರಲ್ ಮತ್ತು ರಾಯಭಾರಿಗಳನ್ನು ಅರಸರೇ ನೇಮಿಸುವರಾದರೂ ಆ ನೇಮಕದ ಅಧಿಕಾರ ಕೇವಲ ಔಪಚಾರಿಕ ಮಾತ್ರ. ಹಿಂದುಸ್ತಾನದ ಮುಖ್ಯ ಮಂತ್ರಿ ಆರಿಸಿದವರನ್ನೇ ಅರಸರು ನೇಮಿಸುವರು.

ಅರಸೊತ್ತಿಗೆಯ ತತ್ವದ ಬಗ್ಗೆಯೆ ಒಂದು ಬಗೆಯ ಪ್ರತಿಕೂಲ ಭಾವನೆ ಭಾರತದಲ್ಲಿ ಹಬ್ಬಿದೆ. ಇದು ಭಾರತಕ್ಕೆ ಮಾತ್ರ ಸೀಮಿತವಾದ ಸಂಗತಿಯಲ್ಲ. ಕೆನಡಾದಲ್ಲಿಯೂ ಇದೇ ಬಗೆಯ ಭಾವನೆಯುಂಟು. ನಿಜವಾಗಿ ನೋಡಿದರೆ ಅರಸೊತ್ತಿಗೆಯ ಮೇಲಿನ ಮಮತೆಯಿಂದಲೆ ಬ್ರಿಟಿಶ ಸಾಮ್ರಾಜ್ಯದ ಬಿಳಿ ರಾಷ್ಟ್ರಗಳು ಕೂಡ ಒಗ್ಗಟ್ಟಾಗಿ ಉಳಿದಿವೆಯೆಂದು ಹೇಳಬರುವದಿಲ್ಲ. ಈ ಒಗ್ಗಟ್ಟಿಗೆ ಸ್ವಭಾವಸಾದೃಶ್ಯ ಮತ್ತು ಹಿತಸಾದೃಶ್ಯಗಳೇ ಕಾರಣವಾಗಿದ್ದವು. ಸ್ವಭಾವದಲ್ಲಿ ವ್ಯತಿರೇಕಗಳಿದ್ದಿದ್ದರೆ, ಹಿತಗಳಿಗೆ ತಡೆ ಬರುತಿದ್ದರೆ ಅರಸನ ಹೆಸರಲ್ಲಿ ಆ ರಾಷ್ಟ್ರಗಳು ೧೯೩೧ ರ ನಂತರ ಒಂದಾಗಿ ಸರ್ವಥಾ ಉಳಿಯುತಿದ್ದಿಲ್ಲ. ಆದ್ದರಿಂದ ಅರಸನಿಗೆ ವಿಧೇಯರಾಗಿರುವುದು-ಇರದಿರುವುದರಲ್ಲಿ ಬ್ರಿಟಿಶ ರಾಷ್ಟ್ರಕೂಟದ ಒಗ್ಗಟ್ಟು-ಮುರುಗಡೆಗಳು ಅಧಿಷ್ಠಿತವಾಗಿಲ್ಲ.

ದ. ಅಫ್ರಿಕೆಯ ಮಾಲನ್
**ಸಾಮ್ರಾಜ್ಯದ ಧೂಮಕೇತು**

ಬ್ರಿಟಿಶರ ನೇತೃತ್ವದಲ್ಲಿ ಇಚ್ಛೆಯಿಂದಲೋ ನಿರ್ಬಂಧದಿಂದಲೋ ತಮ್ಮ ರಾಜಕೀಯ ಆರ್ಥಿಕ ಪ್ರಾರಂಭದಶೆಯನ್ನು ಕಳೆದು ವಿಚಾರಗಳಲ್ಲಿಯೂ ಪರಂಪರೆಗಳಲ್ಲಿಯೂ ಆರ್ಥಿಕ ಹಿತಸಂಬಂಧಗಳಲ್ಲಿಯೂ ಒಂದು ಸಾದೃಶ್ಯವನ್ನು ರೂಪಿಸಿಕೊಂಡದ್ದರಿಂದಲೇ ಆ ರಾಷ್ಟ್ರಗಳು ಮುಂದಾದರೂ ಒಂದು ಗುಂಪಾಗಿ ಸಾಗಲು ಬಯಸುತ್ತಿವೆ.

ನಿಜವಾಗಿ ಇಂದು ಬ್ರಿಟಿಶ ಸಾಮ್ರಾಜ್ಯ ನೌಕೆ ಒಡೆಯುವದಾದರೆ, ಅದು ಸ್ಮಟ್ಸರ ಸ್ವರ್ಗರಾಜ್ಯದಲ್ಲಿ ಬಿಳಿಯರಲ್ಲದವರಿಗೆ ದೊರೆಯುತಿರುವ ಮಾನಮರ್ಯಾದೆಗಳ ಫಲವಾಗಿಯೆ ಆಗಬಹುದೆಂದು ಹೇಳಬಹುದು. ಆಸ್ಟ್ರೇಲಿಯವೂ ಇದಕ್ಕೆ ಹೊರತಲ್ಲ. ಏಶಿಯಾ ನಿವಾಸಿಗಳ ವಿಷಯದಲ್ಲಿ ತಿರಸ್ಕಾರ ಭಾವನೆಯನ್ನು ಅವರು ತೋರೆಯದಿದ್ದರೆ ಅರಸನ ಮೇಲಿನ ಅಭಿಮಾನ ಕೂಡ ಸಾಮ್ರಾಜ್ಯದ ಒಡಕನ್ನು ತಡೆಯಲಾರದು.

---

**ಇಂಡೊನೇಶಿಯದ ಪ್ರಕರಣವನ್ನು** ಸದ್ಯದ ಸಭೆ ಚರ್ಚೆಗೆ ತೆಗೆದುಕೊಳ್ಳಬೇಕೆಂದು ಸಂ. ರಾ. ಸಂಘದ ವಿಷಯನಿಯಾಮಕ ಸಮಿತಿಯು ಭಾರತದ ಬೇಡಿಕೆಯ ಪ್ರಕಾರ ನಿರ್ಧರಿಸಿತು. ಅಸ್ಟ್ರೇಲಿಯದ ಪ್ರತಿನಿಧಿ ಬೇಡಿಕೆಗೆ ಬೆಂಬಲವಿತ್ತಿದ್ದನು. ಆದರೆ ಬ್ರಿಟನ್ನಿನ ಪ್ರತಿನಿಧಿ ಸರ್ ಅಲೆಕ್ಸಾಂಡರ್ ಕ್ಯಾಡೋಗನನು ವಿರೋಧಿಸಿದ್ದನು.

**ಪಾಶ್ಚಾತ್ಯ ಪಂಚರಾಷ್ಟ್ರಗಳ ಸಂರಕ್ಷಣ ಮಂತ್ರಿಗಳು** ಪಶ್ಚಿಮ ಯುರೋಪಿನ ಸಂರಕ್ಷಣೆಗಾಗಿ ಒಂದು ಯೋಜನೆಯನ್ನು ರಚಿಸಿ ಅದನ್ನು ಅಮಲಿಗೆ ತರಲು ಸಿದ್ಧತೆ ನಡೆಸಲು ನಿರ್ಧರಿಸಿದರು.

## ಮೂಲೆ ಮೂಲೆಗಳಿಂದ

ಹಿಂದೆ ವಾಶಿಂಗ್‌ಟನ್ನಿನಲ್ಲಿ ಭಾರತದ ಪೂರಯಿಕೆಯ ಸಮಿತಿಯ ಮುಖ್ಯಾಧಿಕಾರಿಯಾಗಿದ್ದ **ಶ್ರೀ ಮೇಸುಗರರನ್ನು ಅರ್ಜೆಂಟೀನಕ್ಕೆ** ರಾಯಭಾರಿಯನ್ನಾಗಿ ಕಳಿಸಲಾಗುವದೆಂದು ತಿಳಿಯುತ್ತದೆ.

**ಯುಗೊಸ್ಲೇವಿಯದ ಮಾರ್ಶಲ್ ಟಿಟೋ** ಗುಂಡು, ಮದ್ದು, ಸಂಪರ್ಕ ಸಾಧನ, ವೈಮಾನಿಕ ಉಪಕರಣಗಳು ಮುಂತಾದವನ್ನು ಕಳಿಸಲು ಅಮೇರಿಕವನ್ನು ಕೇಳಿಕೊಂಡಿರುವುದಾಗಿ ಸುದ್ದಿ. ಇದಕ್ಕೆ ಅಲ್ಬೇನಿಯದ ಬಂದರಾದ ಡುರಾಜೋದಲ್ಲಿ ಪ್ರತಿನಿತ್ಯ ೩ ರಂತೆ ಹಡಗುಗಳು ರಶಿಯದ ಯುದ್ಧೋಪಕರಣವನ್ನು ತಂದು ಸುರಿಯುತ್ತಿರುವುದರಿಂದ ಉಂಟಾದ ಅಂಜಿಕೆಯೇ ಕಾರಣ.

ಭಾರತೀಯ ವಿಜ್ಞಾನಿಮಂಡಲ ೬ ವಾರಗಳವರೆಗೆ **ಆಸ್ಟ್ರೇಲಿಯದಲ್ಲಿ** ಸುತ್ತಾಡಿ ಅಲ್ಲಿಯ ಸಮಸ್ತ ಪ್ರಯೋಗಶಾಲೆಗಳಿಗೂ ಭೆಟ್ಟಿಯಿತ್ತು ಸ್ವದೇಶಕ್ಕೆ ಹಿಂತಿರುಗಿತು.

**ಇಟಲಿಯಲ್ಲಿ** ಎಲ್ಲೆಡೆಗಳಲ್ಲೂ ಸೋವಿಯಟ್ ರಾಯಭಾರಿ ಕಚೇರಿಗಳನ್ನು ಮುಚ್ಚಲಾಗುವದೆಂದು ತಿಳಿಯುತ್ತದೆ. ಅಟ್ಲಾಂಟಿಕ್ ಒಪ್ಪಂದಕ್ಕೆ ಇಟಲಿ ಸೇರುವೆನೆಂದುದಕ್ಕೆ ರಶಿಯ ಕೊಟ್ಟ ಉತ್ತರದ ಮೊದಲ ಪರಿಚ್ಛೇದವಿದೆಂದು ತಿಳಿಯಬಹುದು.

ಸಂ. ರಾ. ಸಂಘವು ಹಿಂದುಳಿದ ದೇಶಗಳ ಅಭಿವೃದ್ಧಿಗಾಗಿ ನಿಯಮಿಸಿದ ಉಪಸಮಿತಿಯ **ಅಧ್ಯಕ್ಷರಾದ ಡಾ. ವಿ. ಕೆ. ಆರ್. ವಿ. ರಾಯರು** ಜಗತ್ತಿನ ಹಿಂದುಳಿದ ಪ್ರದೇಶಗಳ ಉದ್ಯಮಗಳ ಅಭಿವೃದ್ಧಿಗಾಗಿ ಧನ ಸಹಾಯ ಮಾಡುವ ಯೋಜನೆಯ ಸ್ಥೂಲ ರೂಪವನ್ನು ಹೊರಗೆಡಹಿದ್ದಾರೆ.

ಏಶಿಯವಿಭಾಗದ ಆರ್ಥಿಕ ಸಮಿತಿಯು ಬಾಂಕಾಕಿನಲ್ಲಿ ೮ ದಿನ ಸಭೆ ಸೇರಿ ಸೋವಿಯಟ್ಟಿನ ಪ್ರತಿಭಟನೆಯನ್ನು ಲಕ್ಷಿಸದೆ ವ್ಯಾಪಾರೋದ್ಯಮಗಳಿಗಾಗಿ ಒಂದು ಉಪಸಮಿತಿಯನ್ನು ನಿಯಮಿಸಿತು.

ಅಪಹೃತರಾದ ಕೆಲ **ಮುಸ್ಲಿಮೇತರ ಸ್ತ್ರೀಯರನ್ನು ಅಫಗಾಣಿಸ್ತಾನಕ್ಕೆ** ಒಯ್ಯಲಾಗಿದೆಯೆಂಬ ಸುದ್ದಿ ಹಿಂದೀ ಸರಕಾರಕ್ಕೆ ಮುಟ್ಟಿದೆಯೆಂದೂ ಅವರ ಶೋಧ ನಡೆಸಿ ಹಿಂಕಳಿಸಲು ಅಫಗಾಣ ಸರಕಾರ ಪ್ರಯತ್ನಿಸುತ್ತಿದೆಯೆಂದೂ ತಿಳಿಯುತ್ತದೆ.

**ಅಂತಾರಾಷ್ಟ್ರೀಯ ನಿಧಿಯಿಂ...** ಹಣವನ್ನು ತಿರುಗಿ ತೆಗೆದು... ರಿಂದ ೮,೨೮,೦೦೦೦೦ ಪೌಂಡುಗಳ... ಯುಂಟಾಗಿದೆ. ಬ್ರಿಟಿಶರು ಇದೇ... ತೆಗೆದುಕೊಂಡದ್ದರಿಂದ ಮತ್ತೆ ೭... ಪೌಂಡುಗಳು ಕಡಿಮೆಯಾದವು. ಅ... ಕೊರತೆಯನ್ನು ತುಂಬಿದ್ದಲ್ಲದೆ ಮು... ಯನ್ನು ಹೆಚ್ಚಿಸಲು ಮಾರ್ಶಲ್ ಯೋ... ಹಣವನ್ನು ಸೇರಿಸಿ ೧೯೪೮ ರ ಅ... ೪೫,೭೦,೦೦೮೦೦ ಇದ್ದದ್ದನ್ನು ೪೬,೧೦,... ಪೌಂಡುಗಳಿಗೇರಿಸಲಾಯಿತು.

**ಚೀನೀ ಸಂಧಾನದ ಮಾತುಕ...** ವಾಗಿ ಕಮ್ಯುನಿಸ್ಟರು ಯಾಂಗ್‌ಟ್ಸೀ... ಯುದ್ಧವನ್ನು ದ್ವಿಗುಣಿತ ಉಗ್ರ... ಪ್ರಾರಂಭಿಸಿದರೆಂದೂ ಚೀನೀ ತರುಣ... ೧೦೦೦ ಯೋಧರು ಕಮ್ಯುನಿಸ್ಟರೊಡ... ಕೊಂಡರೆಂದೂ ಇತ್ತೀಚಿನ ಸುದ್ದಿ.

ಇಂದಿನ ಸಂಕಟಗ್ರಸ್ತ ಅಂತಾರಾ... ಪರಿಸ್ಥಿತಿಯನ್ನು ಅನುಲಕ್ಷಿಸಿ ಕಮ್ಯೊ... ಕರಿಸಬೇಕೆಂದು ಕಮ್ಯುನಿಸ್ಟ ಮ... ಮಯೋತ್ಸೇತಂಗನಿಗೆ ರಾಷ್ಟ್ರೀಯ ಸರ... ತಾತ್ಕಾಲಿಕ ಅಧ್ಯಕ್ಷ ಲಿತ್ಸಂಗ್ ಜನ... ಮಾಡಿಕೊಂಡನು.

**ಕಾರೆನ್ನರೊಡನೆ ಒಪ್ಪಂದ... ಕೊಳ್ಳುವುದು ಅಶಕ್ಯವಾಗಿ** ಬ್ರಹ್ಮ... ಕಾರವು ಇನ್‌ಸೀನ್ ಪ್ರದೇಶದಲ್ಲಿ ತರ... ರಾಗದ ಕಾರಣಕ್ಕಾಗಿ ಅವರ ಮೇಲೆ... ವಾಯು ಮಾರ್ಗಗಳಲ್ಲಿ ದಾಳಿ ಮಾಡಲ... ಸಿತು.

ಹಿಂದಿನ ಮಂತ್ರಿ ದೋಸೀನ್... ವಿಮಾನದಲ್ಲಿ ಪ್ರಯಾಣ ಮಾಡುತ್ತಿದ್ದಾ... ಗಾರರ ಗುಂಡಿಗೆ ತುತ್ತಾಗಿ ಮಡಿದನು. ಹಳದಿಪಟ್ಟಿಯ ಜನತಾಸ್ವಯಂ... ಸಂಘದ ದಲಪತಿ. ಮಂಡಾಲೆಯ ... ಸೇಗಾಂಗಿನಲ್ಲಿ ಬಿಳಿ ಪಟ್ಟಿಯವರ ... ಸಿಕ್ಕಿ ೭೦ ನಾಗರಿಕರೂ ೩೦ ಕಮ್ಯುನಿ... ಸತ್ತರು.

**ಟ್ರಾನ್ಸ್‌ಜೋರ್ಡನ್ನಿನ ರಾಜಾ... ರನ್ನು ಕೊಲೆ ಮಾಡಲು** ಸಿರಿಯದ ... ಮಂದಿ ಪಠಾನರು ಪ್ರಯತ್ನಿಸಿ ಸಿ... ದ್ದಾರೆ. ಅವರನ್ನೀಗ ಅರಬ ಸೈನ್ಯದ ನ... ಲಯಕ್ಕೊಪ್ಪಿಸಲಾಗಿದೆ.

ನಡೆದಾಡುವ ಗೊಂಬೆ: ಬರ್ಮಿಂಗ್‌ಹ್ಯಾಮಿನಲ್ಲಿ ನಡೆದ ಮಕ್ಕಳ ಆಟಿಕೆಗಳ ಸಂತೆ... ಮೂರು ವರ್ಷದ ಹುಡುಗಿ ಈ ಗೊಂಬೆಯೊಡನೆ ಆನಂದದಿಂದ ವಾಕಿಂಗ್ ಹೊ... ಡ್ಡಾಳೆ. ಈ ಬೊಂಬೆ ತಲೆಯನ್ನು ಎಡಕ್ಕೊಮ್ಮೆ ಬಲಕ್ಕೊಮ್ಮೆ ತೋರಿಸುತ್ತ ನಡೆಯು...

## ಗ್ರಹಗಳ ಮುನ್ನೋಟ

# ಎಪ್ರಿಲ ೧೮ ರಿಂದ ೨೪ ರ ವರೆಗೆ

**ಜ್ಯೋತಿಷಿ :—ಶ್ರೀ ಕೃಷ್ಣಶಾಸ್ತ್ರಿ ಭಿಡೆ, ಬೆಳಗಾಂವಿ**

### ಮೇಷ

ಹಿಂದಿನ ವಾರವೇ ಸೂಚಿಸಿದಂತೆ ನಿಮ್ಮ ಕಷ್ಟಗಳು ಇನ್ನು ಒಂದೊಂದಾಗಿ ಸಮಾಧಾನ ಹೊಂದುವವು. ನಿಮ್ಮ ಪ್ರಕೃತಿ ಸ್ವಲ್ಪ ಕೆಡಬಹುದಾದರೂ ಉಳಿದವರೆಲ್ಲರು ಸೌಖ್ಯವಾಗಿರುವದರಿಂದ ಪ್ರಾಪಂಚಿಕ ಸುಖ ಚನ್ನಾಗಿದೆಯೆಂದೇ ಹೇಳಬಹುದು. ಉದ್ಯೋಗದಲ್ಲಿ ಉತ್ಪನ್ನವೂ ಪ್ರತಿಷ್ಠೆಯೂ ಚನ್ನಾಗಿದ್ದರೂ ವೆಚ್ಚ ಬಹಳ. ಆದರೆ ಸ್ಥಾವರದಲ್ಲಿ ಸ್ವಲ್ಪ ಸುಧಾರಣೆಯಾದೀತು. ಕೆಲವರು ಮೋಸಮಾಡಲು ಪ್ರಯತ್ನಿಸಬಹುದಾದ್ದರಿಂದ ಎಚ್ಚರವಿರಲಿ. ವಾದ ಸ್ಪರ್ಧೆಗಳಲ್ಲಿ ಮೊದಲು ವೆಚ್ಚ ಮತ್ತು ಹಿಂದೇಟು ಬಿದ್ದರೂ ಕೊನೆಗೆ ತುಂಬ ಅನುಕೂಲ. ಮಿತ್ರಸುಖವೂ ಸಭೆಯಲ್ಲಿ ಮನ್ನಣೆಯೂ ಲಭಿಸುವದು. ಪ್ರವಾಸ ಪತ್ರವ್ಯವಹಾರ ಒಳಿತು. ಭೆಟ್ಟಿ ಅಷ್ಟು ಅನುಕೂಲವಲ್ಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ಮೊದಲೆರಡು ಚರಣಗಳಿಗೆ ಸ್ವಲ್ಪ ತೊಂದರೆ ಹೆಚ್ಚು. ತಾ. ೧೮, ೧೯, ೨೦, ೨೪ ಹಿತ.

### ವೃಷಭ

ಕೆಲ ದಿನಗಳ ವರೆಗೆ ನೀವು ಗ್ರಹಗಳ ಕೋಪಕ್ಕೆ ಪಾತ್ರರಾಗಬಹುದು. ನಿಮ್ಮ ಮತ್ತು ಮಕ್ಕಳ ಪ್ರಕೃತಿ ಕೆಡಬಹುದು. ಉದ್ಯೋಗದಲ್ಲಿ ಎಷ್ಟೆ ತೊಡಕುಗಳೆದ್ದರೂ ಲಾಭಕ್ಕಾಗಲಿ ಪ್ರತಿಷ್ಠೆಗಾಗಲಿ ಕೊರತೆಯಾಗದು ನೀವು ಮುಂದಿನಿಂತ ನಿಮ್ಮ ಸ್ವಂತ ದುರ್ಬುದ್ಧಿಗೆ ಹೆದರುವ ಪ್ರಸಂಗವಿದೆ. ಸ್ಥಾವರದಲ್ಲಿ ಹಾನಿಯಾಗುವದಲ್ಲದೆ ತುಂಬ ವೆಚ್ಚ ಮಾಡಿಯೂ ಕೆಲಸ ಕೈಗೂಡುವದು ಸಂದೇಹಾಸ್ಪದ. ಶತ್ರುಗಳ ಜೋರು ಹೆಚ್ಚುವದು. ಪತ್ರವ್ಯವಹಾರಕ್ಕೂ ಪ್ರವಾಸಕ್ಕೂ ಕಾಲವಲ್ಲ, ಭೆಟ್ಟಿ ಒಳಿತು. ಕೃತ್ತಿಕೆಯ ಕೊನೆಯ ೩ ಮತ್ತು ರೋಹಿಣಿಯ ಮೊದಲೆರಡು ಚರಣಗಳಿಗೆ ಅನಿಷ್ಟ ಕಡಿಮೆ. ತಾ. ೨೦, ೨೧, ೨೨ ಒಳಿತು.

### ಮಿಥುನ

ಹೆಂಡತಿಯ ಪ್ರಕೃತಿ ಕೆಡಬಹುದು ಉಳಿದ ಪ್ರಾಪಂಚಿಕ ಸುಖಕ್ಕೆ ಅಷ್ಟು ಆಪತ್ತಿಯಿಲ್ಲ. ಮಕ್ಕಳ ಉನ್ನತಿ. ನಿಮ್ಮ ಪ್ರಭುತ್ವವನ್ನು ಹೆಚ್ಚಿಸುವ ಮಾತುಕತೆ. ಉದ್ಯೋಗದಲ್ಲಿ ಪ್ರತಿಷ್ಠೆಗೆ ಕುಂದು ಬರುವ ಸಂಭವವಿದೆ. ಆದರೆ ನೌಕರಿ ಮಾಡುವವರಿಗೆ ಒಳಿತು. ಮಿತ್ರಸುಖ ಚನ್ನಾಗಿರುವದು. ಒಬ್ಬ ವಿರಕ್ತ ವಿಭೂತಿಗಳ ಸಹವಾಸ ದೊರಕಬಹುದು. ವಾದ ಸ್ಪರ್ಧೆಗಳಲ್ಲಿ ಮುಂದಿನ ವಾರದ ತನಕ ನಿಮ್ಮ ಕೈಮೇಲಾಗುವ ಲಕ್ಷಣವಿಲ್ಲದಿದ್ದರೂ ನಿಮಗೆ ಸೋಲಿಲ್ಲ. ಭೆಟ್ಟಿಯಿಂದ ಹಿತವಿಲ್ಲ. ಪತ್ರವ್ಯವಹಾರ ಮತ್ತು ಪ್ರವಾಸ ಸುಖಕರ. ಆರ್ದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ಮೊದಲನೆ ೩ ಚರಣಗಳಿಗೆ ಹಾನಿ ಕಡಿಮೆ- ತಾ. ೧೮, ೧೯, ೨೩, ೨೪ ಅನುಕೂಲ.

### ಕರ್ಕ

ನಿಮ್ಮಿಬ್ಬರ ಪ್ರಕೃತಿಯೂ ಅಷ್ಟು ನೆಟ್ಟಗಿರದು. ಮಕ್ಕಳಲ್ಲೊಬ್ಬನ ಏಳ್ಗೆ. ಉದ್ಯೋಗದಲ್ಲಿ ಪ್ರತಿಷ್ಠೆ ಲಾಭ ಉತ್ತಮ ಮತ್ತು ಪ್ರಗತಿಯಂತೂ ಅದ್ಭುತ. ವಾದ ಮತ್ತು ಸ್ಪರ್ಧೆಗಳಲ್ಲಿ ಉಭಯ ಪಕ್ಷಗಳ ಸ್ಥಿತಿಯೂ ಅಷ್ಟೇ. ಪ್ರವಾಸಾದಿ ಕಾರ್ಯಗಳು ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಅಶ್ಲೇಷೆಯ ಮೊದಲಿನ ೩ ಚರಣಗಳಿಗೆ ತುಂಬ ಉತ್ತಮ ಕಾಲ. ತಾ. ೨೦, ೨೧, ೨೨ ಅನುಕೂಲ.

### ಸಿಂಹ

ಸ್ವಂತಕ್ಕೆ ಮತ್ತು ಹೆಂಡತಿಗೆ ಆರೋಗ್ಯ ಭಾಗ್ಯ ಚನ್ನಾಗಿದ್ದು ಅನ್ಯೋನ್ಯವಾಗಿರುವಿರಿ. ಮಕ್ಕಳು ಸ್ವಲ್ಪ ತಲೆತಿರುಕತನ ಮಾಡಬಹುದು. ಉದ್ಯೋಗದಲ್ಲಿ ಪ್ರತಿಷ್ಠೆ ಮಧ್ಯಮ, ಲಾಭ ಉತ್ತಮ, ಶತ್ರುವಿನ ಕಾಟ ಹೆಚ್ಚಿದರೂ ಜಯದ ಒಲವು ನಿಮ್ಮತ್ತ. ಸ್ಥಾವರದಲ್ಲಿ ಅನುಕೂಲ ಮಾತುಗಳು. ಪ್ರವಾಸ ಹಿತವಲ್ಲ. ಪತ್ರವ್ಯವಹಾರ ಮತ್ತು ಭೆಟ್ಟಿ ಅನುಕೂಲ. ಮಘೆಯ ಕೊನೆಯ ೩ ಮತ್ತು ಪೂರ್ವದ ಮೊದಲ ೩ ಚರಣಗಳಿಗೆ ಕಷ್ಟಪಟ್ಟೇ ಕಾರ್ಯಸಾಧನೆ. ತಾ ೧೮, ೧೯, ೨೩, ೨೪ ಅನುಕೂಲ.

### ಕನ್ಯಾ

ಸ್ವಂತದ ಮತ್ತು ಮಕ್ಕಳ ಪ್ರಕೃತಿ ಅಷ್ಟು ಚನ್ನಾಗಿರದು. ಬಂಧುಗಳೂ ನೆರೆಹೊರೆಯವರೂ ಸಹಾನುಭೂತಿಯಿಂದ ವರ್ತಿಸುವರು. ಉದ್ಯೋಗದಲ್ಲಿ ಲಾಭ ಮುಂದಿನವಾರದ ತನಕ ಕಡಿಮೆಯೆ. ಆದರೆ ವೆಚ್ಚ ಮಾತ್ರ ನಿಲ್ಲುವದಿಲ್ಲ. ನಿಮ್ಮ ಮೇಲೆ ಅನೀತಿಯ ಅಪವಾದವನ್ನು ಆಗದವರು ಹೊರಿಸಬಹುದು. ವಾದ ಸ್ಪರ್ಧೆಗಳಲ್ಲಿ ದೂರದೃಷ್ಟಿಯಿಂದ ಅನುಕೂಲವೆನಿಸಿದರೂ ಸದ್ಯಃಫಲ ಮಾತ್ರ ಇಲ್ಲ, ಮತ್ತೂ ಹಾನಿಯೆ. ಪ್ರವಾಸಾದಿ ಕಾರ್ಯಗಳಲ್ಲೂ ನಿರಾಶೆಯೆ. ಉತ್ತರೆಯ ಕೊನೆಯ ೩ ಮತ್ತು ಹಸ್ತದ ಮೊದಲಿನ ೩ ಚರಣಗಳಿಗೆ ಇನ್ನೂ ತೊಂದರೆ ಹೆಚ್ಚು. ತಾ. ೨೦, ೨೧ ಅನುಕೂಲ.

### ತುಲಾ

ನಿಮ್ಮ ಹೆಂಡತಿಗೆ ಅಗ್ನಿ ಅಥವಾ ನೀರಿನಿಂದ ಅಪಘಾತ ಸಂಭವಿಸಬಹುದಾದ್ದರಿಂದ ಸ್ವಲ್ಪ ಎಚ್ಚರಿಕೆ ಇರಲಿ. ಹಲವಿಧದ ತಾಪತ್ರಯಗಳಿಂದ ಮನಸು ಚಿಂತಿತವಾಗಿರುವದು. ಉದ್ಯೋಗದಲ್ಲಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ವಾದ ಸ್ಪರ್ಧೆಗಳಲ್ಲಿ ಹೇಳುವಂಥದೇನೂ ಇಲ್ಲ. ಪ್ರವಾಸ ಪತ್ರವ್ಯವಹಾರ ಹಿತಕರ, ಭೆಟ್ಟಿ ಪ್ರಯೋಜನವಿಲ್ಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖೆಯ ಮೊದಲ ೩ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೮, ೧೯ ೨೪ ಅನುಕೂಲ.

### ವೃಶ್ಚಿಕ

ನಿಮ್ಮ ಹಾಗು ಮಕ್ಕಳ ಪ್ರಕೃತಿ ಚನ್ನಾಗಿದ್ದರೂ ಹೆಂಡತಿಯದು ಅಷ್ಟು ಚನ್ನಾಗಿರದು. ಪ್ರಾಪಂಚಿಕ ಸುಖ ಅಷ್ಟಕ್ಕಷ್ಟೇ. ಉದ್ಯೋಗದಲ್ಲಿ ಪ್ರತಿಷ್ಠೆ ಒಳಿತಾಗಿದ್ದರೂ ಲಾಭ ಮಾತ್ರ ತೀರ ಕಡಿಮೆ. ವಾದ ಸ್ಪರ್ಧೆಗಳಲ್ಲಿ ಸೋಲಬೇಕಾಗುವದು. ಮಿತ್ರರ ವಿರೋಧ. ಪರಸ್ತ್ರೀ ವಿಷಯದಲ್ಲಿ ಕುಬುದ್ಧಿ. ಪ್ರವಾಸ ಮತ್ತು ಭೆಟ್ಟಿ ಅನುಕೂಲ. ಪತ್ರವ್ಯವಹಾರ ನಿಷ್ಫಲ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠದ ಮೊದಲ ೩ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೮, ೧೯, ೨೦, ೨೧ ಒಳಿತು.

### ಧನು

ಮಕ್ಕಳಿಗೂ ನೌಕರ ಚಾಕರರಿಗೂ ಸ್ವಲ್ಪ ಕ್ಲೇಶದ ಯೋಗವಿದೆ. ಆದರೆ ಉಳಿದೆಲ್ಲ ವಿಷಯಗಳಲ್ಲಿ ನಿಮಗೆ ಇನ್ನೂ ಸುದಿನಗಳು ಹಲವು ಕಾಲ ಇವೆ. ನಿಮ್ಮ ಕೈಯಿಂದ ಒಂದು ಧಾರ್ಮಿಕ ಕೃತ್ಯವಾದೀತು. ಉದ್ಯೋಗದಲ್ಲಿಯೂ ಪ್ರತಿಷ್ಠೆ ಮಧ್ಯಮವಾದರೂ ಲಾಭ ಉತ್ತಮ. ವಾದ ಸ್ಪರ್ಧೆಗಳಲ್ಲಿ ಗೆಲವು. ಭೆಟ್ಟಿಯಿಂದ ಫಲವಿಲ್ಲ. ಪತ್ರವ್ಯವಹಾರ ಒಳಿತು. ಪ್ರವಾಸ ಹಿತಕರ, ಮೂಲದ ಕೊನೆಯ ೩ ಮತ್ತು ಪೂರ್ವಾಷಾಢದ ಮೊದಲಿನ ೩ ಚರಣಗಳಿಗೆ ತೊಂದರೆ ಹೆಚ್ಚು. ತಾ. ೨೦, ೨೧, ೨೨, ೨೩. ಅನುಕೂಲ.

### ಮಕರ

ನಿಮ್ಮಿಬ್ಬರ ಪ್ರಕೃತಿಗೂ ಸ್ವಲ್ಪ ಕ್ಲೇಶ ಮಕ್ಕಳು ಎದುರಾಡಬಹುದು. ಉದ್ಯೋಗದಲ್ಲಿ ಪ್ರತಿಷ್ಠೆ, ಲಾಭ ಚನ್ನಾಗಿದೆ. ಆದರೆ ಸ್ಥಾವರದಲ್ಲಿ ತುಸು ತಂಟೆಯೇಳಬಹುದು. ವಾದ ಸ್ಪರ್ಧೆಗಳಲ್ಲಿ ಯಥಾಸ್ಥಿತಿ. ಭೆಟ್ಟಿ ಪತ್ರವ್ಯವಹಾರ ಅನುಕೂಲ, ಪ್ರವಾಸದಲ್ಲಿ ಸುಖವಿಲ್ಲ. ಉತ್ತರಾಷಾಢದ ಕೊನೆಯ ೩ ಮತ್ತು ಶ್ರವಣದ ಮೊದಲ ೩ ಚರಣಗಳು ಸ್ವಲ್ಪ ಕಷ್ಟಪಡಬೇಕಾದೀತು. ತಾ. ೨೦, ೨೧, ೨೨, ೨೩ ಅನುಕೂಲ.

### ಕುಂಭ

ನಿಮ್ಮೆಲ್ಲರ ಪ್ರಕೃತಿಗೂ ಸೌಖ್ಯ. ಮಕ್ಕಳಲ್ಲೊಬ್ಬನ ಉನ್ನತಿ. ಉದ್ಯೋಗದಲ್ಲಿ ಲಾಭ ಪ್ರತಿಷ್ಠೆಗಳಿಗೆ ಕೊರತೆಯಿಲ್ಲದಿದ್ದರೂ ವೆಚ್ಚದ ಹೆಚ್ಚಳದಿಂದ ಕೈ ಬಿಗಿಹಿಡಿಯಬೇಕಾಗುವದು ವಾದ ಸ್ಪರ್ಧೆಗಳಲ್ಲಿ ವೆಚ್ಚವೂ ತೊಂದರೆಯೂ ಬಹಳವಾದರೂ ಫಲ ಅನುಕೂಲವೆ. ಪ್ರವಾಸಾದಿ ಕಾರ್ಯ ಸಫಲ ಶತತಾರೆಯ ಕೊನೆಯ ೩ ಮತ್ತು ಪೂರ್ವಾಭಾದ್ರದ ಮೊದಲ ೩ ಚರಣಗಳಿಗೆ ತೊಂದರೆ ಕಡಿಮೆ ತಾ. ೧೮, ೧೯, ೨೩, ೨೪. ಹಿತ

### ಮೀನ

ಪ್ರಕೃತಿ ಉತ್ತಮ. ಗೃಹಕಲಹದಿಂದ ಸ್ವಲ್ಪ ನೊಂದುಕೊಳ್ಳುವಿರಿ. ಉದ್ಯೋಗದಲ್ಲಿ ಲಾಭ ಪ್ರತಿಷ್ಠೆ ಉತ್ತಮ. ಮಿತ್ರರೊಡನೆ ವಿರೋಧ. ಸ್ಥಾವರದಲ್ಲಿ ಅನುಕೂಲ ಮಾತುಕತೆ. ವಾದ ಸ್ಪರ್ಧೆಗಳಲ್ಲಿ ಜಯ. ಪ್ರವಾಸಾದಿ ಕಾರ್ಯ ನಿರ್ವಿಘ್ನ. ಉತ್ತರಾಭಾದ್ರದ ಕೊನೆಯ ೩ ಮತ್ತು ರೇವತಿಯ ಮೊದಲ ೩ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧೮, ೧೯, ೨೦, ೨೧ ಅನುಕೂಲ.

---

## ಸರ್ವೋದಯ ಸಮ್ಮೇಲನ

(೭ ನೇ ಪುಟದಿಂದ)

ಪರಿಗ್ರಹವು ವಿವಿಧ ರೂಪಗಳನ್ನು ತಳೆಯುತ್ತದೆ. ಕೆಲವರು ಹಣವನ್ನು ಸಂಗ್ರಹಿಸಿ ಇಡುತ್ತಾರೆ, ಹಲವರು ಪುಸ್ತಕಗಳನ್ನು ಸಂಗ್ರಹಿಸುತ್ತಾರೆ. ಇನ್ನುಳಿದವರು ತಮ್ಮ ಸಲುವಾಗಿ ಸಂಗ್ರಹಿಸುವದಿಲ್ಲಆದರೆತಮ್ಮ ಸಂಸ್ಥೆಗಳ ಸಲುವಾಗಿ ಹಾಗೆ ಮಾಡಗೊಡುವರು. ತನ್ನ ಸಲುವಾಗಿ ಕೊಲ್ಲದೆ ಯಾವುದೊಂದು ಧ್ಯೇಯಕ್ಕಾಗಿ ಇಲ್ಲವೆ ತನ್ನ ದೇಶಕ್ಕಾಗಿ ಎರಡನೆಯವರನ್ನು ಕೊಲ್ಲುವರು. ನನ್ನ ದೃಷ್ಟಿಯಿಂದ ಎರಡೂ ಅಷ್ಟೆ ಕೆಟ್ಟ ಮತ್ತು ವಿಸಂಗತವಾಗಿವೆ. ಉದಾಹರಣೆಗಾಗಿ ಚರಖಾ ಸಂಘದ ಹತ್ತರ ಹಣ ಉಳಿಕೆಯಾಗುತಿದ್ದು ಅದನ್ನು ಬ್ಯಾಂಕಿನಲ್ಲಿ ಇಡಲಾಗುತ್ತದೆ. ಬಡ್ಡಿಗಾಗಿ ಹೀಗೆ ಮಾಡಲಾಗುತ್ತದೆ. ಚರಖಾದ ಸಲುವಾಗಿ ಬೇಕಾದುದಕ್ಕಿಂತ ಹೆಚ್ಚು ಹಣ ಸಂಘದಲ್ಲಿ ಇದೆ ಎಂಬುದು ಇದರಿಂದ ಸ್ಪಷ್ಟವಾಗುವದು ಆದರೆ ಬಡ್ಡಿ ಕೊಡಲು ಬ್ಯಾಂಕುಗಳು ಹೇಗೆ ಸಮರ್ಥವಾಗುವುವು? ವಿವಿಧ ಲಾಭದಾಯಕ ಉದ್ಯೋಗಗಳಿಗಾಗಿ ಅವು ಸಾಲಗಳನ್ನು ಕೊಡುತ್ತವೆ. ಈ ವಿಸಂಗತತೆಯನ್ನು ನೋಡಿರಿ. ಚರಖಾ ಕಾರ್ಯಕ್ಕಾಗಿಯೆಂದೆ ಸಂಘದಲ್ಲಿ ಹಣವಿದ್ದುದರಿಂದ ಗೋಸೇವಾ ಸಂಘಕ್ಕಾಗಿ ವಿನಿಯೋಗಿಸಲಾರದು. ಗೋಸೇವಾ ಕಾರ್ಯ ರಚನಾತ್ಮಕ ಕಾರ್ಯಕ್ರಮಗಳಲ್ಲಿಯ ಒಂದು ಅಂಗವಾಗಿದ್ದರೂ ಅದಕ್ಕಾಗಿ ಚರಖಾಸಂಘವು ತನ್ನ ನಿಧಿಯನ್ನು ವಿನಿಯೋಗಿಸಲಾರದು. ಆದರೆ ಬ್ಯಾಂಕುಗಳ ಮುಖಾಂತರ ಆ ಹಣವು ಬೇರೆ ಉದ್ಯೋಗಗಳಿಗಾಗಿ ವಿನಿಯೋಗಿಸಲಾಗುತಿದೆ. ನಮ್ಮ ಸಂಸ್ಥೆಗಳ ಹೆಸರಿನಲ್ಲಿಯಾದರೂ ಹಣ ವಿರಬೇಕು ಎಂಬ ನಮ್ಮ ದುರಾಸೆಗಾಗಿ ನಾವು ಹಣ ಸಂಪಾದಿಸುತಿರುವೆವಾದ್ದರಿಂದ ಈ ವಿಸಂಗತೆಯುಂಟಾಗುತ್ತದೆ. ಕಸ್ತೂರಬಾ ನಿಧಿಯ ಕತೆಯೂ ಹೀಗೆಯೇ ಇದೆ. ಗಾಂಧೀ ಸ್ಮಾರಕ ನಿಧಿಯ ಕತೆಯೂ ಹೀಗೆಯೇ ಆಗಬಹುದು. ಇಷ್ಟೊಂದು ಹಣವನ್ನು ಕೂಡಿಸುವ ಅವಶ್ಯಕತೆ ನಮಗೇಕೆ ಬೀಳುತ್ತದೆ? ಅಷ್ಟು ಹಣವು ನಿಜವಾಗಿ ಅವಶ್ಯವಾಗಿದ್ದರೆ ಒಂದೆರಡು ವರುಷಗಳಲ್ಲಿಯೇ ಅದನ್ನು ವ್ಯಯ ಮಾಡುವದು ಶಕ್ಯವಾಗಬೇಕು. ಆದರೆ ಹಾಗೆ ಆಗುವದಿಲ್ಲ ಮತ್ತು ಈ ಹಣವನ್ನು ಬ್ಯಾಂಕುಗಳಲ್ಲಿ ಇಟ್ಟು ಅದರಿಂದ ಹಣವನ್ನು ಗಳಿಸುವದರಲ್ಲಿ ಯಾರೂ ದೋಷವನ್ನೆಣಿಸುವದಿಲ್ಲ. ಬಡ್ಡಿಯನ್ನು ತೆಗೆದುಕೊಳ್ಳದಿರುವದು ಮೂರ್ಖತನ ಎಂದು ತಿಳಿಯುವ ಸಮಾಜದಲ್ಲಿ ನಾವು ಹುಟ್ಟಿ ಬೆಳೆದು ಬಂದದ್ದೇ ಇದಕ್ಕೆ ಕಾರಣ. ಎಲ್ಲ ಸಂಗ್ರಹವನ್ನೂ ಬಿಟ್ಟುಬಿಡಿರಿ. (ತ್ಯಕ್ತ ಸರ್ವ ಪರಿಗ್ರಹಃ) ಎಂದು ಗೀತೆಯು ಉಪದೇಶಿಸುತ್ತದೆ. ಧರ್ಮಾರ್ಥ ಸಂಸ್ಥೆಗಳ ಸೊತ್ತೂ ಇದರಲ್ಲಿ ಅಡಕವಾಗುತ್ತದೆ. ಯಾವದೇ ಸ್ವರೂಪದಲ್ಲಿ ಸಂಗ್ರಹಕ್ಕೆ ಅವಕಾಶ ಕೊಟ್ಟೆವೆಂದರೆ ಖಾಸಗಿ ಆಸ್ತಿಯನ್ನು ಮಾಡುವ ಮೊದಲಾದ ಎಲ್ಲ ಬಗೆಯ ತಪ್ಪುಗಳನ್ನು ಮಾಡಲು ಅವಕಾಶ ದೊರೆಯುವದು.

### ನಿಯಂತ್ರಣಗಳು

ಮುಗಿಸುವ ಮೊದಲು ಇನ್ನೊಂದು ವಿಷಯವನ್ನು ನಾನು ತೆಗೆದುಕೊಳ್ಳುವೆ. ಪದಾರ್ಥಗಳ ಅಭಾವಕ್ಕಾಗಿ ನಮಗೆ ಬಹಳ ತೊಂದರೆಯಾಗುತಿದೆ. ನಿಯಂತ್ರಣವಿಲ್ಲದಾಗ ನಮಗೆ ತೊಂದರೆಯಾಯಿತು. ಈಗ ನಿಯಂತ್ರಣಗಳನ್ನು ಹೇರಿದ ಬಳಿಕವೂ ಆ ತೊಂದರೆ ಹಾಗೆಯೇ ಸಾಗಿದೆ, ಎರಡು ಪದ್ಧತಿಗಳಿಂದಲೂ ನಮಗೆ ತೊಂದರೆಯಾಗಹತ್ತಿದೆ. ಪ್ರವಾಸದಲ್ಲೆಲ್ಲ ಈ ವಿಷಯದ ಅಭ್ಯಾಸ ಮಾಡುವ ಅವಕಾಶ ನನಗೆ ಬೇಕಾದಷ್ಟು ದೊರೆಯುತಿರುವುದರಿಂದ ಬಹಳ ದಿನಗಳಿಂದ ಈ ಬಗ್ಗೆ ನಾನು ವಿಚಾರ ಮಾಡುತಿರುವೆನು. ಹಪ್ತೆಯನ್ನು ಧಾನ್ಯರೂಪದಲ್ಲಿ ತೆಗೆದುಕೊಳ್ಳುವದರಿಂದ ಈ ತೊಂದರೆಯನ್ನು ಕೆಲಮಟ್ಟಿಗೆ ಹೋಗಲಾಡಿಸಬಹುದೆಂದು ನಾನೊಮ್ಮೆ ರಾಜಘಾಟಿನ ಸಭೆಯಲ್ಲಿ ಹೇಳಿದ್ದೆ ಮತ್ತು ಕಾಂಗ್ರೆಸ ಕಾರ್ಯಸಮಿತಿಗೂ ಸೂಚಿಸಿದ್ದೆ. ಬಟ್ಟೆಯ ಬಗ್ಗೆ ಆಗುವ ತೊಂದರೆಗಳನ್ನು ಖಾದಿ ಮೂಲಕ ಮಾತ್ರ ಕಡಮೆ ಮಾಡಬಹುದು. ನೀವು ಈ ಸೂಚನೆ ಬಗೆಗೆ ವಿಚಾರ ಮಾಡಿ, ಯುಕ್ತವೆಂದು ನಿಮ್ಮ ಮನವರಿಕೆಯಾದರೆ ನಿಮ್ಮಲ್ಲಿ ಬೇಕಾದವರು ಅಭಿಪ್ರಾಯವನ್ನು ಹೇಳಬಹುದು. ನಿಮ್ಮ ಅಭಿಪ್ರಾಯಕ್ಕೆ ಇದು ಸರಿಹೊಂದದಿದ್ದರೆ ಇದನ್ನು ಬಿಟ್ಟು ಕೊಡತಕ್ಕದು. (ಡಿ. ಎಂ.)

---



---

ಹೊಸ ಪುಸ್ತಕಗಳು

# ಶಿಕ್ಷಣದ ಬಗ್ಗೆ ಕೂಲಂಕಷ ಪ್ರತಿಪಾದನೆ

**ಶಿಕ್ಷಣತತ್ವದರ್ಶನ**

ಬರೆದವರು ಡಾಕ್ಟರ್ ಎಂ. ಸಿದ್ಧಲಿಂಗಯ್ಯ ಮತ್ತು ಶ್ರೀ ಎಸ್. ಎಸ್. ವೀರಪ್ಪ. ಪ್ರಕಾಶಕರು ಎಸ್.ಎಸ್.ಎನ್. ಪುಸ್ತಕ ಪ್ರಕಟನಾಲಯ, ಹೊಸ ಮಾರ್ಕೆಟ್, ಬೆಂಗಳೂರು ನಗರ. ಪುಟ ೫೩೪, ಬೆಲೆ ಆರು ರೂಪಾಯಿ.

ಶಿಕ್ಷಣದ ಬಗ್ಗೆ ಕನ್ನಡದಲ್ಲಿ ಈ ವರೆಗೆ ಇಷ್ಟು ವಿಸ್ತಾರವಾದ, ವಿಷಯಬಾಹುಲ್ಯವುಳ್ಳ ಪುಸ್ತಕ ಹೊರಟಿದ್ದು ಇದೇ ಮೊದಲು. ಬರಹಗಾರರಾದರೂ ಅಧಿಕೃತ ವ್ಯಕ್ತಿಗಳೇ ಇರುವುದು ಸಮಂಜಸವಾಗಿದೆ. ಪುಸ್ತಕದಲ್ಲಿ ೧೭ ಪ್ರಕರಣಗಳಿವೆ. ಅವುಗಳಲ್ಲಿ ಭಾರತೀಯ ಶಿಕ್ಷಣಕ್ಕೊಂದು ನೂತನ ತತ್ವದೃಷ್ಟಿ, ಶಿಕ್ಷಣ ಸಾಧನೆ, ಮಕ್ಕಳ ಬೆಳವಣಿಗೆಯ ಮುಖ್ಯವಾದ ಅಂತಸ್ತುಗಳು. ಪಠ್ಯ ವಸ್ತುವಿನ ನಿರ್ಮಾಣ ಪುನರ್ವ್ಯವಸ್ಥೆ, ಬೋಧನೆ ಮತ್ತು ಕಲಿವು, ಬೋಧನ ಕ್ರಮ, ಪಾಠೋಪಕರಣ, ಪರೀಕ್ಷಾ ಕ್ರಮ, ಮಕ್ಕಳ ಮನೋರಾಜ್ಯ ಮುಂತಾದ ಅತ್ಯಂತ ಉಪಯುಕ್ತ ಅಂಶಗಳನ್ನು ವಿಶದವಾಗಿ ವಿವರಿಸಲಾಗಿದೆ.

ಮೊದಲ ಪ್ರಕರಣದಲ್ಲಿ ಅನುಭವವೇ ಶಿಕ್ಷಣ, ಜೀವನವೇ ಅನುಭವ, ಆದ್ದರಿಂದ ಜೀವನವೇ ಶಿಕ್ಷಣ, ಶಿಕ್ಷಣವೇ ಜೀವನ. ಎಂಬ ಪರಮಾರ್ಥವನ್ನು ಸ್ಪಷ್ಟಪಡಿಸಲಾಗಿದೆ. ಶಿಕ್ಷಣವನ್ನು ಜೀವನ ತತ್ವಗಳಿಗೆ ಹೊಂದಿಸಿಕೊಂಡು ಅದರ ಸಮಸ್ಯೆಗಳನ್ನು ಬಿಡಿಸಿದ ಹೊರತು ಶಿಕ್ಷಣ ಕಾರ್ಯ ಫಲಪ್ರದವಾಗುವಂತಿಲ್ಲವೆಂದು ಶಿಕ್ಷಣದ ವ್ಯಾವಹಾರಿಕ ಅರ್ಥದಿಂದ ನಿರೂಪಿಸಲು ಹೊರಡಲಾಗಿದೆ. ಮಾನವ ಜೀವನದ ಹೆಗ್ಗುರಿ ನಾಗರಿಕತೆಯ ನಿರ್ಮಾಣ, ನಾಗರಿಕ ಸಮಾಜದ ನಿರ್ಮಾಣ ಎಂಬ ಅಂಶವನ್ನು ಒತ್ತೊತ್ತಿ ಹೇಳಲಾಗಿದೆ. ಈ ಒತ್ತಿ ಹೇಳುವ ಸರ್ವೋದಯದ, ಸರ್ವ ಕಲ್ಯಾಣದ ಬಯಕೆ ಪುಸ್ತಕದ ಆದ್ಯಂತ ಬೇಸರ ಬರುವಷ್ಟು ಸಲ ಪುನರುಕ್ತವಾಗಿದೆ. ಇದೇ ಪ್ರಕರಣದಲ್ಲಿ ಬರುವ ವಿಜ್ಞಾನ ದೃಷ್ಟಿಯ ಸರ್ವಗ್ರಾಹ್ಯತೆಯ ಬಗ್ಗೂ ಹಲವು ಸಲ ಹೇಳಲಾಗಿದೆ, ಒಮ್ಮೊಮ್ಮೆ ಈ ಪುನರುಕ್ತಿಗಳು ಯಾವುದಾದರೊಂದು ಪ್ರಕರಣದಲ್ಲಿ ಒಂದೇ ಪುಟದಲ್ಲಿ ಒಮ್ಮೆ ಹೇಳಿದ ಪದ ಸಂಹತಿಯಿಂದಲೆ ೨-೩ ಸಲ ಬರುವುದೂ ಉಂಟು. ಇದು ಪುಸ್ತಕ ಮುಗಿಸಿದ ಮೇಲೆ ಪುನಃ ಪರಿಶೀಲಿಸದಿದ್ದುದರ ಫಲವಿರಬಹುದು.

೨ ನೆಯದಾಗಿ, ವಿಚಾರ ದೃಷ್ಟಿ, ಔದ್ಯೋಗಿಕ ಪ್ರಗತಿ ಮತ್ತು ಪ್ರಜಾಸತ್ತಾತ್ಮಕ ಜೀವನ ಇವು ಮೂರು ಆಧುನಿಕ ಮಾನವಸಮಾಜದ ಪ್ರಧಾನ ಗುಣಗಳೆನ್ನಲಾಗಿದೆ. ಸಾಂಪ್ರದಾಯಿಕ ಅಥವಾ ಆರ್ಷೇಯ ಶಿಕ್ಷಣದಲ್ಲಿ ವಿಚಾರ ಜ್ಞಾನಕ್ಕೆ ಅವಕಾಶವಿಲ್ಲವೆಂಬದು ಬರಹಗಾರರ ಹಾಡಿನ ಪಲ್ಲವಿ. ಹಿಂದಿನದೆಲ್ಲ ಅಂಧಾನುಕರಣವೆಂಬುದು ಅವರ ಅಧಿಕಾರಸೂತ್ರ. ಈಗ ಹಾಗಿಲ್ಲವೆಂದು ಆದರಿಂದ ಸೂಜ್ಞವಾದ ಅರ್ಥ ಮಾತ್ರ ಸಾಕಾಂಕ್ಷವೆಂದು ಬಲ್ಲವರು ಬಲ್ಲರು ಮತ್ತು ಈ ಪುಸ್ತಕವೇ ಅದಕ್ಕೆ ಸಾಕ್ಷಿ. ಇದರಲ್ಲಿ ಸ್ವಂತ ಸಂಶೋಧನದ ಲವಲೇಶವೂ ಇಲ್ಲ; ಶಿಕ್ಷಣದ ಬಗ್ಗೆ ಇರುವ ಸರ್ವಾಭಿಪ್ರಾಯಗಳೂ ಪಾಶ್ಚಾತ್ಯ ಶಿಕ್ಷಣ ತಜ್ಞರವು. ಈ ಪುಸ್ತಕ ಮಾಡಿಕೊಡುವ ದೊಡ್ಡ ಉಪಕಾರವೆಂದರೆ, ಆಂಗ್ಲ ಭಾಷೆಯಲ್ಲಿ ಬರೆದ ಹಲವಾರು ಶಿಕ್ಷಣ ಗ್ರಂಥಗಳ ಸಾರವನ್ನು ಒತ್ತಟ್ಟಿಗೆ ತಿಳಿಯಾಗಿ ಕೊಡುವುದೊಂದೇ. ಸದ್ಯದ ಶಿಕ್ಷಣಪದ್ಧತಿಯನ್ನು ಅನುಸರಿಸುತ್ತಿರುವ ಉಪಾಧ್ಯಾಯರಿಗೆ ಇದರಿಂದ ಬಹಳ ಲಾಭವಾಗಬಹುದು.

೧-೨ ನೆಯ ಪ್ರಕರಣಗಳಲ್ಲಿ ಹೇಳಿದ ಪ್ರಾಸಂಗಿಕ ನೀತಿಸೂತ್ರಗಳು ಕಡೆಯ ಪ್ರಕರಣಗಳಲ್ಲಿ ಕೂಡ ಪುನರುಕ್ತವಾಗುತ್ತವೆ. "ಉಪಾಧ್ಯಾಯರು ತಾವೇ ಬಿಡಿಸಿ ಇತ್ಯರ್ಥ ಪಡಿಸಿದ ವಿಷಯಜ್ಞಾನವನ್ನು ತಿಳಿಸಿಬಿಡುವುದರಿಂದ ಆ ಕಾರ್ಯಸಾಧನೆಯಾಗಲಾರದು; ಸಮಾಜದಲ್ಲಿ ಕಾಣಬಹುದಾದ ಸಮಸ್ಯೆಗಳನ್ನು ಬಾಲಕರ ಮುಂದೆ ತರಬೇಕು; ಅವುಗಳನ್ನು ವಿದ್ವೇಷವಿಲ್ಲದೆ ವಿಮರ್ಶಿಸುವ ಆಲೋಚನಾಶಕ್ತಿಯನ್ನು ಅವರಲ್ಲಿ ಬಿತ್ತಿ ಬೆಳೆಸಬೇಕು" ಎಂಬುದು ಬೋಧನಾಕ್ರಮ ಎಂಬ ಪ್ರಕರಣದಲ್ಲೂ ಪದೇಪದೇ ಉಕ್ತವಾಗಿದೆ. ಶಾಸ್ತ್ರಗ್ರಂಥವೆನಿಸಿದ ಈ ಪುಸ್ತಕದಲ್ಲಿ ಹೀಗೆ ಅಭಿಪ್ರಾಯಗಳ ಪುನರುಕ್ತಿ ಬರುವುದು ನಿಂದ್ಯ. ಲೇಖಕರಿಗೆ ಪಾರಿಭಾಷಿಕವಲ್ಲದ ಪದಸಂಹತಿಗಳಲ್ಲೂ ಬೇಸರ ಬರದಂತೆ ಬೇರೆ ಬೇರೆ ಪದಗಳನ್ನು ಪ್ರಯೋಗಿಸುವ ಶಕ್ತಿ ಇಲ್ಲವೆಂಬುದು ಕ್ಷಣ ಕ್ಷಣಕ್ಕೆ ಎದುರಾಗುವ ಅವರ 'ಅಭಿರುಚಿ ಆಸಕ್ತಿಗಳು', 'ದೃಷ್ಟಿ ಧ್ಯೇಯಗಳು,' 'ಕಲ್ಯಾಣ ಸಾಧನೆ' ಮುಂತಾದ ಪದ ಸಂಹತಿಗಳಿಂದ ತಿಳಿದುಬರುತ್ತದೆ.

"ನಾಗರಿಕತೆ ಉತ್ತುಂಗ ಶಿಖರಕ್ಕೇರುತ್ತಿದ್ದರೂ ನಮ್ಮ ಪಾಶವೀ ಗುಣಗಳೂ ಅರ್ಭಟಿಸುತ್ತಲೇ ಬರುತ್ತಿವೆ" ಎಂಬಂಥ ವ್ಯಾಹತಿಗಳು ಪುಸ್ತಕದಲ್ಲಿ ಕಂಡುಬರಲು ಲೇಖಕರು ಸಂಸ್ಕೃತಿ, ನಾಗರಿಕತೆ, ಶಿಕ್ಷಣ, ಮತ, ಧರ್ಮ ಮುಂತಾದ ಪದಗಳ ಲಕ್ಷಣವನ್ನು ಅರಿತಿಲ್ಲದುದೇ ಕಾರಣ. ಇದರಿಂದ ದರ್ಶನವೆಂದು ಪುಸ್ತಕಕ್ಕೆ ಇಟ್ಟ ಹೆಸರಿನ ಉತ್ತುಂಗತೆಗೆ ಧಕ್ಕೆಯುಂಟಾಗುತ್ತದೆ. ದರ್ಶನವೆಂಬುದರಲ್ಲಿ ಬರತಕ್ಕ ಶೈಲಿಯನ್ನಂತೂ ಎಲ್ಲೂ ಕಾಣಲಾಗವಲ್ಲ. ಆ ಬಿಗುಹಿಲ್ಲ, ಲಕ್ಷಣಬದ್ಧತೆಯಿಲ್ಲ, ವಾಕ್ಯಶುದ್ಧತೆಯಿಲ್ಲ. ಆದರೆ ಸಾಮಾನ್ಯರಿಗೆ ಓದಲು ಅನುಕೂಲವಾಗುವಂತೆ ಸರಳವಾಗಿ ಬರೆದುದು ಹೆಸರಿಗೆ ಹೊರತಾಗಿದ್ದರೂ ಪ್ರಯೋಜನಕಾರಿಯೆನ್ನದಿರಲಾಗದು.

ಇಂದಿನ ವಿದ್ಯಾಲಯಗಳು 'ಕರಣಿಕರನ್ನು ಸೃಷ್ಟಿಸುವ ಅಂಶವನ್ನು ಮೇಲಿಂದ ಮೇಲೆ ಹೇಳಲಾಗಿದೆ. ಅದೇ ಮೇರೆಗೆ ಇಂದಿನ ಶಿಕ್ಷಣದಲ್ಲಿ "ಬೋಧಿಸುವ ವಿಷಯಕ್ಕೂ ನಮ್ಮ ಜೀವನದಲ್ಲಿ ಕಂಡುಬರುವ ಸಮಸ್ಯೆಗಳಿಗೂ ಸಂಬಂಧವೇ ಇಲ್ಲ" ಎಂಬ ಅಂಶವನ್ನು ಹಲವಾರು ಪ್ರಕರಣಗಳಲ್ಲಿ ಪುನಃ ಪುನಃ ಉಲ್ಲೇಖ ಮಾಡಲಾಗಿದೆ. ಇಂಥ ೨೫-೩೦ ಉದಾಹರಣೆಗಳನ್ನು ಕೊಡಬಹುದು.

'ಶಿಕ್ಷಣದ ಗುರಿ' ಎಂಬ ಪ್ರಕರಣದಲ್ಲಿ ಸದ್ಗುಣ ಮತ್ತು ಬುದ್ಧಿಶಕ್ತಿಗಳನ್ನು ಬೆಳೆಸುವುದು ಶಿಕ್ಷಣದ ಗುರಿ ಎಂದು ಹೇಳಲಾಗಿದೆ. ಸದ್ಬುದ್ಧಿ ಎಂದು ಎರಡನ್ನು ಒಟ್ಟಿಗೇ ಸೇರಿಸಿ ಹೇಳಿ ಬಿಡಬಹುದ್ದು [illegible] ಮಾನಸಿಕ ಪ್ರಸಂಗಗಳಿಗೆ [illegible] ಕೀರ್ಣತೆಯೆಂದುದೂ ಪಾಶ್ಚಾತ್ಯ ಸರಣಿಯ [illegible] ವಿಚಾರ ನಡೆಸಿ ಆಂಗ್ಲ ಪರಿಭಾಷೆಗಳನ್ನು [illegible] ಕನ್ನಡಕ್ಕಿಳಿಸಿದ್ದರ ಪರಿಣಾಮ. ಆದ್ದರಿಂದಲೇ ಪುಸ್ತಕವೊಂದು ಅನುವಾದವೆನ್ನಿಸುವುದಲ್ಲದೆ ಸ್ವಯಂಕೃತ ವೆನಿಸುವುದಿಲ್ಲ. ದಾರ್ಶನಿಕರೆನಿಸಿಕೊಂಬ ಬಯಕೆಯುಳ್ಳ ಲೇಖಕರು ಭಾಷೆ ಮತ್ತು ಶೈಲಿಗಳಲ್ಲಿ ಹಿಡಿತ ಪಡೆದವರಾಗಿರಬೇಕಿತ್ತು. ತಾವೇ ೪೭೧ ನೆಯ ಪುಟದಲ್ಲಿ ಹೇಳಿರುವ "ಪದಗಳ ನಿರ್ದುಷ್ಟ. ಅರ್ಥಪರಿಚಯ" ತಮಗೇ ಸರಿಯಾಗಿಲ್ಲವೆಂಬುದನ್ನು ಹಲವೆಡೆ ಅವರು ತೋರಿಸಿಕೊಂಡಿದ್ದಾರೆ. ಹೆಜ್ಜೆ ಹೆಜ್ಜೆಗೆ ಎಡಹುವ ಪ್ರಾಧಾನ್ಯತೆ, ಪ್ರಾಮುಖ್ಯತೆ, ಐಕ್ಯತೆ, ವೈಶಾಲ್ಯತೆ, ವೈವಿಧ್ಯತೆ, ಜಿಗುಪ್ಸೆ, ಅಧ್ಯಾತ್ಮ, ಅನೂಚಾನ, ಮನಮೋಹಕ, ಮನರಂಜನ, ಅಂಗಸೌಷ್ಠವ, ಉಚ್ಛ, ಜಟಿಲ, ಬಾಲಕಿ ಅಕ್ಷರಶಃ, ಸಂಜೀವಿನಿ, ಅನ್ವೇಷಣೆ, ಭವಿಷ್ಯ ಅಂತರರಾಷ್ಟ್ರೀಯ ಮುಂತಾದ ಪದಗಳು ಅದಕ್ಕೆ ನಿದರ್ಶನಗಳಾಗಿವೆ. ಉದಹರಿಸು, ಅಭ್ಯಾಸಿಸು ಎಂಬ ವಿಲಕ್ಷಣ ಪದಪ್ರಯೋಗಗಳಲ್ಲದೆ ಮತ ಧರ್ಮ ಶಿಕ್ಷಣ ಪ್ರಸಾದನ (ಕೆಲವೆಡೆ ಪ್ರಸಾಧನ), ಅಭಿನಂಜನ ಮುಂತಾದ ಪದಗಳನ್ನು ನಿರ್ದಿಷ್ಟಾರ್ಥಜ್ಞಾನವಿಲ್ಲದೆ ಬಳಸಲಾಗಿದೆ. ಕೆಲವೆಡೆ ಪಾಶ್ಚಿಮಾತ್ಯ ಪಾಶ್ಚಾತ್ಯ, ಐಚ್ಛಿಕ ಐಚ್ಚಿಕ, ಕನಿಷ್ಟ ಕನಿಷ್ಠ ಮುಂತಾದ ಭಿನ್ನ ರೂಪಗಳನ್ನು ಬಳಸಿದ್ದು ಲೇಖಕರಿಗೆ ಆ ರೂಪಗಳ ಬಗ್ಗೆ ಇರುವ ಸಂಶಯವನ್ನು ಹೊರಗೆಡುಹುವುದಲ್ಲದೆ ಮುದ್ರಣ ದೋಷವನ್ನಲ್ಲ.

ವಿದ್ಯಾರ್ಥಿಗಳನ್ನು ಅತಿಯಾಗಿ ದಂಡಿಸುವುದು ಖಂಡನೀಯ. ಆದರೆ ಎಂದೂ ದಂಡಿಸದಿರುವುದು ಅವ್ಯವಹಾರ್ಯ. ಪುಸ್ತಕದಲ್ಲಿ ದಂಡನೆ ವರ್ಜ್ಯ ಎಂದು ಲೇಖಕರು ಆತ್ಮತೃಪ್ತಿಯಾಗುವಷ್ಟು ಸಲ ಹೇಳಿ, ಅದೇ ಬಾಯಲ್ಲಿ ಮಕ್ಕಳ ದುಷ್ಪ್ರವೃತ್ತಿಯನ್ನು ತಡೆಯಲು ಅವರಿಗೆ ಅಂಜಿಕೆ, ನಷ್ಟದ ಅನುಭವ, ದುಷ್ಪರಿಣಾಮದ ಭವಿತವ್ಯತೆ ಮುಂತಾದ ಅಂಶಗಳನ್ನು ಮನದಟ್ಟು ಮಾಡಿ ಕೊಡಲು ಬೇಕಾದ 'ಸನ್ನಿವೇಶ'ಗಳನ್ನು ರಚಿಸಬೇಕೆಂದು ಹೇಳುತ್ತಾರೆ. ಈ 'ಸನ್ನಿವೇಶ' ಎಂಬುದರ ಲಕ್ಷಣವೇನೆಂಬುದನ್ನು ವಿವರಿಸಿಲ್ಲ. 'ಜಗತ್ತನ್ನು ದೇವರು ಸೃಷ್ಟಿಸಿದನು' ಎಂದರೆ ಜಗತ್ತಿನ ಆದಿ ಕಾರಣದ ಬಗ್ಗೆ ನಮಗೆ ಎಷ್ಟು ಜ್ಞಾನವಾಗುವುದೋ ಅಷ್ಟೇ ಜ್ಞಾನ ಅವರು ಹೇಳುವ 'ಸನ್ನಿವೇಶ' ರಚನೆಯಿಂದಲೂ ಆಗುತ್ತದೆ. ತರಗತಿಯಲ್ಲಿ ಪಾಠ ಮಾಡುವಾಗ ದುಷ್ಪ್ರವೃತ್ತರಿಗೆ ಮನಃಶಾಸ್ತ್ರದ ಪ್ರಯೋಗ ಶಾಲೆಯ ಸನ್ನಿವೇಶ ರಚನೆ ವ್ಯವಹಾರ್ಯವೆಂಬುದೊಂದೇ ಲೇಖಕರ ಧ್ಯೇಯಾತ್ಮಕ ದರ್ಶನವಲ್ಲ. ಸರ್ವ ಶಿಕ್ಷಣದ ಮಾರ್ಗ ಹಿಡಿದ ಇಂದಿನ ೩೦-೪೦ ಬಾಲಕ ಬಾಲಿಕೆಯರ ತರಗತಿಗಳುಳ್ಳ ಶಾಲೆಯಲ್ಲಿ ಗುರು ವೈಯಕ್ತಿಕವಾಗಿ ಪ್ರತಿಯೊಬ್ಬ ವಿದ್ಯಾರ್ಥಿಯಲ್ಲೂ ಆಸಕ್ತಿ ಅವಧಾನಗಳನ್ನು ವಹಿಸಿ ೪೦—೪೫ ನಿಮಿಷಗಳೊಳಗೆ ಯಾಂತ್ರಿಕವಾಗದಂತೆ (?) ಹರ್ಬಾರ್ಶಿಯನ್ ಕ್ರಮದಂತೆ ಪಾಠ ಹೇಳಬೇಕೆಂಬುದು ಅಂಥ ಇನ್ನೊಂದು ಧ್ಯೇಯವಾದ.

"ಶಿಕ್ಷಣ ಸಾಧನಗಳ"ಲ್ಲಿ ಒಳ್ಳೆಯ ಕುಟುಂಬ ಜೀವನ ಮಕ್ಕಳಿಗೆ ಅಮೂಲ್ಯವೂ ಉಚಿತವೂ ಆದ ಶಿಕ್ಷಣವಾಗಿ ಪರಿಣಮಿಸುತ್ತದೆ, ಎಂದಿರುವುದೂ ಎಲ್ಲ ಮತಗಳಿಗೂ ಸಾಮಾನ್ಯವೆನಿಸುವ ಉದಾತ್ತ ತತ್ವಗಳನ್ನು ಬೋಧಿಸುವುದು ಉತ್ತಮ ಧರ್ಮಶಿಕ್ಷಣ ಎಂದಿರುವುದೂ ಬಹಳ ಗ್ರಾಹ್ಯವಾದ ವಿಚಾರ. ಪಾಠಶಾಲೆಯ ಸ್ಥಾನ, ಮಾನ, ರೀತಿ, ನೀತಿಗಳನ್ನು ಚೆನ್ನಾಗಿ ಮನನೀಯವಾಗಿ ವಿಶದಪಡಿಸಲಾಗಿದೆ. ಉಪಾಧ್ಯಾಯರ ವ್ಯಕ್ತಿತ್ವಮತ್ತು ಆದರ್ಶಗಳ ಬಗ್ಗೂ ಸದ್ವಿವರಣೆಯನ್ನು ಕೊಡಲಾಗಿದೆ. ಆದರೆ ಒಂದೆರಡೆಡೆ ಅವರ ಪ್ರಾಧಾನ್ಯಮತ್ತು ಗೌಣತ್ವಗಳನ್ನು ಹೇಳುವಾಗ ವ್ಯಾಹತಿಯೊದಗಿದೆ. ಮುಂದಿನ ಪ್ರಕರಣದಲ್ಲಿ ಬುದ್ಧಿಪ್ರಾಧಾನ್ಯವನ್ನು ಕೊಂಡಾಡಲಾಗಿದೆ. ಆ ಬುದ್ಧಿ ವಿಕಾಸವಾಗಿ ಆಲೋಚನಾಶಕ್ತಿ ಬೆಳೆಯಲು ಪದ ಜ್ಞಾನ ಆವಶ್ಯಕವೆಂಬ ಅಂಶವನ್ನೂ ಮತ್ತೊಂದು ಪ್ರಕರಣದಲ್ಲಿ ಹೇಳಲಾಗಿದೆ. ಅಂತೂ ಮಾನವನ ಸರ್ವಾಂಗೀಣವಾದ ಸಾಮಾಜಿಕ ಉನ್ನತಿಯನ್ನು ರೂಪಿಸಲು ತೆಗೆದುಕೊಳ್ಳಬೇಕಾದ ತರಬೇತಿಗೆ ಶಿಕ್ಷಣವೆನ್ನಬೇಕೆಂದು ಲೇಖಕರು ಅಭಿಪ್ರಾಯ ಪಟ್ಟಿರುವುದು ಅವರ ಭಿನ್ನ ಭಿನ್ನ ವಾಕ್ಯಗಳ ಸಾರಾಂಶವನ್ನು ತೆಗೆದಾಗ ತಿಳಿಯುತ್ತದೆ.

ಗಂಡು ಮಕ್ಕಳಲ್ಲಿ ಬುದ್ಧಿಶಕ್ತಿಯ ಅತಿರೇಕ ಉತ್ಕರ್ಷ ಮತ್ತು ಅಧೋಗತಿಗಳು ಕಂಡುಬಂದಿವೆಯೆಂದೂ ಹೆಣ್ಣುಮಕ್ಕಳಲ್ಲಿ ಸರ್ವಸಾಧಾರಣತೆ ತೋರಿದೆಯೆಂದೂ ಲೇಖಕರು ಅಭಿಪ್ರಾಯಪಟ್ಟಿರುವುದು ವಿಚಾರಣೀಯ. ಪ್ರಾಥಮಿಕ ಶಾಲೆಗಳಲ್ಲಲ್ಲದೆ ಮಿಕ್ಕೆಡೆ ಸಹವಿದ್ಯಾಭ್ಯಾಸವಿರಬಾರದೆಂಬುದು ಲೇಖಕರ ಮತ. ಅದಕ್ಕೆ ಅವರು ಸನಾತನ ಕಾರಣಗಳನ್ನು ಕೊಟ್ಟಿದ್ದಾರೆ. ವರ್ಧಾಯೋಜನೆಯಲ್ಲಿ ಹೇಳಿರುವಂತೆ ಉದ್ಯಮ ಪ್ರಧಾನವಾದ ಶಿಕ್ಷಣದ ಕಡೆಗೇ ಲೇಖಕರ ಒಲೆತ ಹೆಚ್ಚು. ಆದರೂ ಪಾಂಡಿತ್ಯದ ಹುಚ್ಚೂ ಅವರಿಗೆ ಬಿಟ್ಟಿಲ್ಲ. ಹೀಗಾಗಿ ಅದೂ ಬೇಕು ಇದೂ ಬೇಕು, ಹಾಗೂ ಇರಬೇಕು ಹೀಗೂ ಇರಬೇಕು ಎಂದು ಆದರ್ಶಸಾಮರಸ್ಯ, ಸಾಮಂಜಸ್ಯಗಳನ್ನು ಹೇಳುವ ಉಬ್ಬರದಲ್ಲಿ ಅನೇಕ

—೮ನೆಯ ಪುಟಕ್ಕೆ

ಹರಿಜನ ಲೇಖ

ಅಗ್ರಲೇಖ

# ಪುನರುಜ್ಜೀವನ

ಕಳೆದ ಸಂಚಿಕೆಯಲ್ಲಿ ನಾನು ಭಂಗಿಗಳ ಪ್ರಕರಣವನ್ನು ವಿಸ್ತಾರವಾಗಿ ಬಣ್ಣಿಸಿದ್ದೆ. ಆದರೆ ಭಂಗಿಗಳ ಅವಸ್ಥೆಯಷ್ಟೇ ದಾರುಣವೂ ಸದ್ಯೋಃಭವಿಷ್ಯತ್ತಿನಲ್ಲಿ ಆಗಬಹುದಾದ ಸುಧಾರಣೆಗಳನ್ನು ಎಣಿಸಿದರೆ ಬಹುಶಃ ಅಷ್ಟೇ ನಿರಾಶಾಮಯವೂ ಆದ ಸ್ಥಿತಿಗತಿಯುಳ್ಳ ಇನ್ನೂ ಕೆಲ ಕಸಬುಗಳಿವೆ. ಉದಾಹರಣೆಗಾಗಿ, ಭೂಮಿಯಿಲ್ಲದ ಒಕ್ಕಲುತನದ ಕೂಲಿಕಾರರು, ಬಹಳ ಚಿಕ್ಕ ಹೊಲಗಳನ್ನು ಸಾಗುಮಾಡುವ ಬಡ ಗೇಣಿಯ ಒಕ್ಕಲಿಗರು, ಕೈಯಲ್ಲಿ ಕಾಸಿಲ್ಲದ ನಿರಾಶ್ರಿತರು, ಚಿತಗಾಂಗಿನ ದುರ್ಲಕ್ಷಕ್ಕೊಳಗಾದ ಸರಕಾರೀ ನೌಕರರು ಮತ್ತು ಪ್ರಾಥಮಿಕ ಶಾಲೆಗಳ ಶಿಕ್ಷಕರು ಇವರೆಲ್ಲರ ಅವಸ್ಥೆಯೂ ಭಂಗಿಗಳದಕ್ಕಿಂತ ಕಡಿಮೆ ದುಃಖಕರವಾಗಿಲ್ಲ. ಅವರು ಭಂಗಿಗಳಂತೆ ಸಾಮಾಜಿಕ ತುಚ್ಛೀಕಾರಕ್ಕೆ ಮಾತ್ರ ಒಳಗಾಗಿಲ್ಲ, ಅಷ್ಟೆ. ಮೇಲೆ ಹೇಳಿದವರಲ್ಲಿ ಕಡೆಯ ಎರಡು ವರ್ಗಗಳು ಒಂದು ವಿಧದಲ್ಲಾದರೂ ಸ್ವಲ್ಪ ಭಾಗ್ಯಶಾಲಿಗಳಾಗಿವೆಯೆನ್ನಬಹುದು— ಅವರು ಕಾಯಂ ನೌಕರರಾಗಿರುವದರಿಂದ ಸಂಪು ಹೂಡುವ ಬೆದರಿಕೆ ಹಾಕಿ ಕೆಲಮಟ್ಟಿಗಾದರೂ ತಮ್ಮ ದೂರುಗಳನ್ನು ನೀಗಿಸಿಕೊಳ್ಳಬಲ್ಲರು. ಆದರೆ ಭೂಮಿಯಿಲ್ಲದ ಕೂಲಿಕಾರನಾಗಲಿ, ಬಡ ಗೇಣಿಯೊಕ್ಕಲಾಗಲಿ, ನಿರಾಶ್ರಿತನಾಗಲಿ ಯಾರ ವಿರುದ್ಧ ಸಂಪು ಹೂಡಬೇಕು? ನಿರಾಶ್ರಿತನನ್ನು ಸದ್ಯಕ್ಕೆ ಸರಕಾರದವರು ಪೋಷಿಸಬಹುದು. ಆದರೆ ಭೂಮಿಯಿಲ್ಲದ ಹೊಲದ ಆಳು ಸಂಪು ಹೂಡಿದರೆ ಅವನ ಹೊಟ್ಟೆಹೊರೆಯುವವರಾರು? ಈ ವರ್ಗದ ಜನರಿಗೆ ತಮ್ಮ ದುರವಸ್ಥೆಯನ್ನು ಹೋಗಲಾಡಿಸಲು ಬೇರಾವ ಉಪಾಯವೂ ಕಾಣದಿರುವದೇ ಅವರಲ್ಲಿ ಹಿಂಸಾತ್ಮಕ ಚಳವಳಿ ಹಬ್ಬಲು ಕಾರಣವೆಂದು ನನ್ನ ಅಭಿಪ್ರಾಯ. ಅವರು ಗಳಿಸುವ ಹಣ ನಿತ್ಯದ ನಿರ್ವಾಹಕ್ಕೇ ಸಾಲುವದಿಲ್ಲ. ಅದನ್ನೂ ಅವರು ಬಿಟ್ಟುಕೊಟ್ಟರೆ ಅವರಿಗೆ ಜೀವನಕ್ಕೆ ಮಾರ್ಗವೇ ಇಲ್ಲದಾಗುವದು. ಅಲ್ಲದೆ ಅವರು ಸಂಪು ಹೂಡಿದರೆ ಕೂಡ, ಅವರ ಸೇವೆ ಅತ್ಯವಶ್ಯವೇ ಆಗಿದ್ದರೂ ಅದರ ತಾತ್ಪೂರ್ತಿಕ ನಿಲುಗಡೆಯಿಂದ ಹೊಲಸು ಕೂಡಿ ಬೀಳುವದೂ ಇಲ್ಲ, ನಿತ್ಯ ಸಾವಿರಗಟ್ಲೆ ರೂಪಾಯಿ ಹಾನಿಯಾಗುವಂತೆ ಕಾರಖಾನೆಗಳು ನಿಂತು ಹೋಗುವದೂ ಇಲ್ಲವಾದುದರಿಂದ ಅದನ್ನು ಅವಸರದ ಸಂಗತಿಯೆಂದು ಯಾರೂ ಬಗೆಯುವದಿಲ್ಲ. ಶಿಕ್ಷಕರಿಗೆ ಕೂಡ ಸಂಪು ಹೂಡುವದು ಸುಲಭವೆನಿಸುವದಿಲ್ಲ. ಏಕೆಂದರೆ ಕೆಲ ದಿನಗಳ ವರೆಗೆ ಶಾಲೆಗಳು ಮುಚ್ಚಿದರೂ ಶೌಚಕೂಪಗಳನ್ನು ಸ್ವಚ್ಛ ಮಾಡದಿರುವಷ್ಟು, ಇಲ್ಲವೆ ಕಾರಖಾನೆಗಳೋ ರೇಲ್ವೆಗಳೋ ಟಪಾಲೋ ನಿಂತು ಹೋದಷ್ಟು ತೀಕ್ಷ್ಣವಾದ ಅಸೌಕರ್ಯ ಅದರಿಂದಾಗುವದಿಲ್ಲ.

ಜನರು ಮನಸಾ ಹಿಂಸೆಯನ್ನು ಮೆಚ್ಚುವದಿಲ್ಲ, ಹಿಂಸೆಯಿಂದ ಅವರಿಗೆ ಕೊನೆಗೆ ಸುಖವೂ ದೊರಕುವದಿಲ್ಲ. ಏಕೆಂದರೆ ಹಿಂಸೆಯಿಂದ ಅಧಿಕಾರದಲ್ಲಿರುವ ಸರಕಾರವನ್ನು ಉರುಳಿಸಿ ಅವ್ಯವಸ್ಥೆ ಪ್ರಕ್ಷೋಭಗಳನ್ನುಂಟುಮಾಡಬಹುದಾದರೂ ಅದರಲ್ಲಿ ಅನೇಕ ತಲೆಮಾರುಗಳ ಪ್ರಚಂಡ ಶ್ರಮದಿಂದ ನಿರ್ಮಿಸಲ್ಪಟ್ಟ ಸೊತ್ತುಗಳು ನಾಶವಾಗಿ ಸಾವಿರಗಟ್ಲೆ ಜನರು ಮನೆಮಾರು ಕಳೆದುಕೊಂಡು ಪರದೇಶಿಗಳಾಗುವರು. ನೂರಾರು ಬಲಿಷ್ಠ ಪುರುಷರು ಅಪಮೃತ್ಯುವಿಗೀಡಾಗುವರು. ಅಳಿದುಳಿದವರು ಹೆಚ್ಚಾಗಿ ಮುದುಕರೂ ನಿರ್ಬಲರೂ ತಬ್ಬಲಿಗಳೂ ಆಗಿರುವರು. ಆದರೆ ಪಾಮರ ಜನತೆಗೆ ತಿಳಿವಳಿಕೆಯೂ ಇಲ್ಲ ವಿಚಾರಶೀಲತೆಯೂ ಇಲ್ಲ ಅದು ಕ್ಷಣಿಕ ಆವೇಶದ ಶೀಘ್ರವ್ಯಾಪಿಯಾದ ಹುಚ್ಚಿನ ಭರದಲ್ಲಿ ಹಿಂಸೆಯನ್ನೂ ಹಾನಿಯನ್ನೂ ಉಂಟುಮಾಡಿ, ಕೊನೆಗೆ ಸಾಯುವವರೆಗೆ ಪಶ್ಚಾತ್ತಾಪಿಸುವದುಂಟು. ಜನತೆಯಲ್ಲಿ ಹಿಂಸಾಚಾರಕ್ಕಿಳಿಯುವವರೆಂದರೆ ಮೇಲೆ ಹೇಳಿದ ಒಂದಲ್ಲ ಒಂದು ಕಸಬಿಗೆ ಸೇರಿದವರೆಂಬದು ಅನುಭವದ ಮಾತು.

ಅವರಿಗೆ ಸುಖತರವಾದ ಭವಿತವ್ಯದ ಆಸೆಯನ್ನು ಹುಟ್ಟಿಸಿ, ತಮ್ಮ ಸ್ವಂತ ಶಕ್ತಿಯ ಅರಿವನ್ನು ಮಾಡಿಕೊಟ್ಟು ತಮ್ಮ ಭವಿಷ್ಯತ್ತು ತಮ್ಮ ಕೈಯಲ್ಲಿ ಇದೆಯೆಂಬ ಆತ್ಮವಿಶ್ವಾಸವನ್ನುಂಟುಮಾಡುವ ಅಹಿಂಸಾತ್ಮಕ ಉಪಾಯವೊಂದು ಕಾಣಿಸದಿದ್ದರೆ ಅವರು ಹಿಂಸಾಚಾರದ ಪಿಡುಗಿಗೆ ತುತ್ತಾಗುವ ಸಂಭವವೇ ಹೆಚ್ಚು. ಜಾತೀಯತೆಯ ಮತ್ತು ಕಮ್ಯುನಿಜಮಿನ ಪ್ರಚಾರವನ್ನು ಹಿಂಸಾಪ್ರಚೋದನೆಯ ಸಹಿತವಾಗಿ, ಸುವ್ಯವಸ್ಥಿತವಾಗಿ ಶಿಕ್ಷಕರ ಮೂಲಕವೇ ನಡೆಸಲಾಗಿದೆಯೆಂಬ ಸಂಗತಿಯನ್ನು ಈಗಾದರೂ ಮನವರಿತುಕೊಳ್ಳಲಾಗಿದೆಯೋ ಇಲ್ಲವೋ ನಾನರಿಯೆ. ಯಾರಾದರೂ ಭಾವಿಸಬಹುದಾದಂತೆ ಇದನ್ನು ಸರಕಾರದಧೋರಣೆಯನ್ವಯಮಾಡದೆ, ಸ್ವೇಚ್ಛೆಯಿಂದ, ಅವಶ್ಯವಿದ್ದರೆ ಗುಟ್ಟಾಗಿಯೂ ಸ್ವಾರ್ಥತ್ಯಾಗಪೂರ್ವಕವಾಗಿಯೂ ಮಾಡಲಾಗುತ್ತಿದೆ.

ಇದನ್ನು ಪರಿಹರಿಸಿ ಇಚ್ಛಿತವನ್ನು ನೆರವೇರಿಸುವ ನಿಶ್ಚಿತವೂ ಅಹಿಂಸಾತ್ಮಕವೂ ಆದ ಒಂದೇ ಒಂದು ಉಪಾಯವೆಂದರೆ, ನಾನು ತಿಳಿದಿರುವ ಮಟ್ಟಿಗೆ, ಚರಕ ಮತ್ತು ಅದರ ಬಂಧುವಾದ ಕೈಮಗ್ಗ; ತನ್ನ ಈಗಿನ ಅವಸ್ಥೆ ದೀನವಾಗಿದೆಯೆಂದು ಬಗೆಯುವ ಪ್ರತಿಯೊಬ್ಬನೂ ಅದನ್ನೆದುರಿಸಿ ಯಥಾಶಕ್ತಿ ಹೆಣಗಾಡುತ್ತ ಸಂಗಡಲೆ ಕೈನೂಲು ತೆಗೆಯುವ ಮತ್ತು ಕೈಮಗ್ಗ ನಡೆಸುವ ಕೆಲಸದಲ್ಲಿ ತೊಡಗಲಿ. ಹಿಂದೆ ಹೇಳುತ್ತಿದ್ದಂತೆ ಕೆಲ ಕಾಸು ಹೆಚ್ಚು ಗಳಿಸುವ ಸಲುವಾಗಿ ಅವನಿದನ್ನು ಕೈಕೊಳ್ಳದೆ ಸ್ವಂತದ ಬಟ್ಟೆಗಾಗಿ ಕೈಕೊಳ್ಳಲಿ. ಅಂದ ಮೇಲೆ ಅವನು ತನ್ನ ನಿತ್ಯದ ಉದ್ಯೋಗವನ್ನು ಬಿಟ್ಟುಕೊಡಬೇಕಾಗಿಲ್ಲ; ಅದರಲ್ಲೇ ಹೆಚ್ಚಿನ ಸೌಕರ್ಯಗಳನ್ನು ಸಂಪಾದಿಸುವ ಅಥವಾ ಅದಕ್ಕಿಂತ ಲಾಭದಾಯಕವಾದ ಬೇರೆ ಉದ್ಯೋಗವನ್ನು ಹುಡುಕುವ ಪ್ರಯತ್ನಗಳನ್ನು ಬಿಟ್ಟು ಬಿಡಬೇಕಾಗಿಯೂ ಇಲ್ಲ. ಆದರೆ ಅವನು ತನ್ನ ವಿರಾಮ ವೇಳೆಯನ್ನು ನೂಲುವ ನೇಯುವ ಕೆಲಸಕ್ಕೆ ವಿನಿಯೋಗಿಸಬೇಕು ಮತ್ತು ಖಾದಿಯನ್ನು ನೂಲುವ ನೇಯುವವರ ಒಂದು ಬಳಗವನ್ನು ಸ್ಥಾಪಿಸಲು ಯತ್ನಿಸಬೇಕು. ಕೆಲ ದಿನಗಳ ಮೇಲೆ ತಾನೂ ತನ್ನ ಬಳಗದವರೂ ನೂತು ನೇಯ್ದುದ್ದು ತಮಗೆಲ್ಲರಿಗೂ ಸಾಕಾಗಿ ಮತ್ತೂ ಉಳಿಯುವದೆಂದು ಅವನಿಗೆ ಕಂಡುಬಂದೀತು. ಇದರಿಂದ ಅವರಲ್ಲಿ ಹಿಂದೆಂದೂ ಅನಿಸಿರದಷ್ಟು ಆತ್ಮವಿಶ್ವಾಸ ಹುಟ್ಟುವದು. ಸರ್ವ ಸುಲಭವಾದೊಂದು ಕಲೆಯಲ್ಲಿ ತಾವು ಪಾರಂಗತರಾಗಿರುವದನ್ನೂ ಅವರು ಕಂಡುಕೊಳ್ಳುವರು. ಅಲ್ಲದೆ, ಚರಕವನ್ನು- ಅದೂ ತಮ್ಮ ಜೀವನದ ಈ ನಿಟ್ಟಿನಲ್ಲಿ- ಆಶ್ರಯಿಸಿದರೆ ಅವರಲ್ಲಿ ಅವಶ್ಯಕವಾದ ಇತರ ಸಾಮಾಜಿಕ ಮತ್ತು ನೈತಿಕ ಸುಧಾರಣೆಯನ್ನು ತಂದೊಡ್ಡಲು ಅನುಕೂಲವಾದ ಭಾವನೆಯನ್ನೂ ಸಂವಿಧಾನವನ್ನೂ ನಿರ್ಮಿಸಿದಂತಾಗುವದು. ಬರಿ ಕೆಲಸಗಾರ ಸಂಘದ ಸದಸ್ಯತ್ವದಿಂದ ಬರಬಹುದಾದುದಕ್ಕಿಂತ ಬಲಿಷ್ಠವು ರೂಢಮೂಲವೂ ಆದ ಐಕ್ಯವನ್ನು ಅದು ಅವರಲ್ಲಿ ಸ್ಥಾಪಿಸುವದು. ಇವೆಲ್ಲ ಸಂಗತಿಗಳಿಂದ ಅವರಿಗೆ ತಮ್ಮ ವೃತ್ತಿಯಲ್ಲಿ ಹೆಚ್ಚು ಉತ್ತಮವಾದ ಸೌಕರ್ಯಗಳನ್ನು ಸಂಪಾದಿಸಲು ಅಥವಾ ಅದು ಸಾಧ್ಯವಾಗದಿದ್ದರೆ ಆ ವೃತ್ತಿಗೆ ಸದಾಕಾಲ ಶರಣು ಹೊಡೆಯಲು ಸಹಾಯವಾಗುವದು. ಅವರು ಸಂತತ ಖಾದಿ ಉತ್ಪಾದಕರಾಗಿಯೂ ವ್ಯವಹರಿಸಬಲ್ಲವರಾಗುವರು. ನಿಜವಾದ ಅಖಿಲ ಭಾರತ ಚರಕ ಸಂಘ ಆಗ ಅಸ್ತಿತ್ವಕ್ಕೆ ಬಂದಂತಾದೀತು. ಅದರ ಸದಸ್ಯಸಂಖ್ಯೆಯೂ ಎಲ್ಲ ಕೂಲಿಕಾರ ಸಂಘ ಮತ್ತು ರಾಜಕೀಯ ಸಂಸ್ಥೆಗಳನ್ನು ಸೇರಿಸಿದ್ದಕ್ಕಿಂತಲೂ ಹೆಚ್ಚಾದೀತು. ಅದು ತನ್ನದೇ ಕ್ಷೇತ್ರದಲ್ಲಿ ಒಡೆಯರೆಂಬವರ ಹಂಗಿಲ್ಲದೆ ಇರಬಲ್ಲದು. ಅದು ಅವರವೇ ಆದ ಬಾಂಧವ್ಯವಾದೀತು, ಕೂಲಿಕಾರ ಸಂಘವಾದೀತು. ಸಂಗಡಲೇ ಅದು ಜೀವನದ ಇತರ ಅನೇಕ ಗ್ರಾಮೀಣ ಮತ್ತು ನಾಗರಿಕ, ಯಾಂತ್ರಿಕ ಮತ್ತು ದೈಹಿಕ, ಉತ್ಪಾದಕ ಮತ್ತು ವಿತಾರಕ ಪರಿಶ್ರಮಗಳೊಡನೆ ನಿಕಟವಾದ ಸಂಬಂಧವನ್ನೂ ಇಟ್ಟುಕೊಳ್ಳುವದು. ಅದು ಪೂರ್ಣವಾಗಿ ಅಹಿಂಸಾತ್ಮಕ ಅಂದೋಲನವಾಗಿರುವದಲ್ಲದೆ, ಒಂದು ವೃತ್ತಿಯನ್ನು ಸಂಪೂರ್ಣ

## ಮಂತ್ರಿಮಂಡಲಗಳ ಪತನ

ಮಧ್ಯಭಾರತ, ಮದರಾಸ ಮತ್ತು ಪೂರ್ವ ಪಂಜಾಬ ಪ್ರಾಂತಗಳ ಮುಖ್ಯ ಮಂತ್ರಿಗಳು. ತಮ್ಮ ಪಕ್ಷದ ಸಾಕಷ್ಟು ಬೆಂಬಲ ಸಿಕ್ಕದಿದ್ದುದರಿಂದ ಇತ್ತೀಚೆ ರಾಜೀನಾಮೆ ಸಲ್ಲಿಸಬೇಕಾಯಿತು. ಮದರಾಸ ಪ್ರಾಂತ ಮತ್ತು ಪಶ್ಚಿಮ ಬಂಗಾಲದಲ್ಲಿ ಹಿಂದೊಮ್ಮೆ ಇದೇ ಬಗೆಯಾಗಿ ಮಂತ್ರಿಮಂಡಲಗಳು ರಾಜೀನಾಮೆ ಕೊಡುವ ಪ್ರಸಂಗ ಬಂದದ್ದುಂಟು. ಪತ್ರಿಕೆಗಳಲ್ಲಿ ಪ್ರಸಿದ್ಧವಾದ ಸುದ್ದಿಗಳನ್ನು ನೋಡಿದರೆ ಈ ಬದಲಾವಣೆಗೆ ಅಧಿಕಾರಲಾಲಸ ವರ್ಗಸ್ಥ ರಾಜಕಾರಣಿಗಳ ಗತ್ತುಗಾರಿಕೆಯ ಹೊರತು ಬೇರೆ ಮಹತ್ವದ ಕಾರಣಗಳು ತೋರುವದಿಲ್ಲ. ಒಂದು ಪಂಗಡ ನಿವೃತ್ತವಾಗಿ ಮತ್ತೊಂದು ಪಂಗಡ ಅಧಿಕಾರದಲ್ಲಿ ಬರುವದರಿಂದ ಧೋರಣದಲ್ಲಿ ಬದಲಾವಣೆಯಾಗಲಿ ಆಡಳಿತೆಯಲ್ಲಿ ಸುಧಾರಣೆಯಾಗಲಿ ಇವಾವ ಪ್ರಾಂತಗಳಲ್ಲಿಯಾದರೂ ಆಗುವ ಸಂಭವ ತೀರ ಕಡಮೆ. ಏನೂ ಕೆಲಸವಿಲ್ಲದಾಗ ಇದೊಂದು ಹರಟೆಯ ವಿಷಯ ಮಾತ್ರವಾಗುವದಲ್ಲದೆ ಜನತೆಯ ಸುಖಸೌಕರ್ಯಗಳ ದೃಷ್ಟಿಯಿಂದ ವಿಶೇಷ ಮಹತ್ವವೇನೂ ಈ ಬದಲಾವಣೆಯಲ್ಲಿ ಇರುವುದಿಲ್ಲ. ಬಹಳಾದರೆ ಜನತೆಯ ದೈನಂದಿನ ಕಾರ್ಯಕಲಾಪಗಳಲ್ಲಿ ಕೆಲ ಇಷ್ಟರಿಗೆ ಹೆಚ್ಚು ಮಹತ್ವ ಸಿಕ್ಕಬಹುದು. ಬ್ರಿಟಿಶಪೂರ್ವಕಾಲದಲ್ಲಿ ಹಿಂದೀ ಸಂಸ್ಥಾನಗಳಲ್ಲಿ ನಡೆದಿದ್ದ ರಾಜಕಾರಣದ ಚದುರಂಗದಾಟವು ಮತ್ತೊಮ್ಮೆ ಪ್ರಾರಂಭವಾದಂತೆ ತೋರುತ್ತದೆ.

ಪ್ರತಿವರುಷ ಧುರೀಣರ ಆಯ್ಕೆ ನಡೆಯಬೇಕೆಂದು ಕಾಂಗ್ರೆಸ ಶಾಸನ ಸಭಾಪಕ್ಷದವರು ನಿಯಮ ಮಾಡಿಕೊಂಡಿರುವರೆಂದು ನನಗೆ ತಿಳಿದುಬರುತ್ತದೆ. ಈ ನಿಯಮವು ಜಾಣತನದ್ದು ಹೇಗೋ ಎಂದು ನನಗೆ ಹೊಳೆಯದು. ಇದೆಷ್ಟೊಂದು ಕಿಡಿಗೇಡಿತನದ್ದಾಗಿದೆಂಬುದನ್ನು ತಿಳಿಯುವದೇನು ಕಠಿನವಲ್ಲ. ಶಾಸನ ಸಭೆಯ ಆಯ್ಕೆಯು ನಾಲ್ಕು ಇಲ್ಲವೆ ಐದು ವರ್ಷಗಳಿಗೊಮ್ಮೆ ಆಗುತಿರುವಾಗ ಧುರೀಣರ ಆಯ್ಕೆ ಮಾತ್ರ ಪ್ರತಿವರುಷ ಆಗುವುದರ ಅರ್ಥವೇನು? ಇದರಿಂದ ಧುರೀಣರ ಅಧಿಕಾರಾವಧಿ ಅನಿಶ್ಚಿತವಾಗಿ ವಿಶಿಷ್ಟ ಹಿತಸಂಬಂಧಗಳನ್ನು ಸಂತೋಷಿಸುವ ಹಾಗು ಅಧಿಕಾರದ ಮತ್ತು ಸ್ಥಾನಮಾನಗಳ ದುರುಪಯೋಗ ಮಾಡಿಕೊಳ್ಳುವ ಪ್ರವೃತ್ತಿಯುಂಟಾಗುವದಲ್ಲದೆ ತಮ್ಮ ಶಾಖೆಯ ಕಾರ್ಯಕಲಾಪಗಳತ್ತ ಹೆಚ್ಚು ಲಕ್ಷ ವಹಿಸದೆ ಸಂಚಾರ, ವ್ಯಾಖ್ಯಾನ ಮತ್ತು ಸಂತೋಷ ಕೂಟ ಮೊದಲಾದವುಗಳಲ್ಲಿ ಹೆಚ್ಚು ವೇಳೆ ಕಳೆಯುವ ಪ್ರವೃತ್ತಿ ಬೆಳೆಯುವದು. ಶಾಸನ ಸಭೆ ಊರ್ಜಿತದಲ್ಲಿರುವಾಗ, ಗಂಭೀರ ಕಾರಣಗಳಿಗಾಗಿಯಲ್ಲದೆ, ಮಧ್ಯಾವಧಿಯಲ್ಲಿ, ಒಮ್ಮೆ ಆರಿಸಲ್ಪಟ್ಟ ಧುರೀಣರನ್ನು ಕಿತ್ತುಹಾಕತಕ್ಕದ್ದಲ್ಲ. ಮೇಲೆ ಉಲ್ಲೇಖಿಸಿದ ಯಾವ ಸಂದರ್ಭಗಳಲ್ಲಿಯೂ ಅಂಥ ಬಲವತ್ತರವಾದ ಗಂಭೀರ ಕಾರಣಗಳು ಇದ್ದಂತೆ ತೋರುವದಿಲ್ಲ.

ಈ ಮೂರು ಮಂತ್ರಿಮಂಡಳಗಳಲ್ಲಿಯ ಹಲವಾರು ಸದಸ್ಯರು ಧ್ಯೇಯನಿಷ್ಠರೂ ಶೀಲಸಂಪನ್ನರೂ ಆಗಿದ್ದರಲ್ಲದೆ ಸಮರ್ಥ ಮತ್ತು ಅನುಭವಶಾಲಿಗಳಾಗಿದ್ದರೆಂಬುದು ಖಚಿತವಾಗಿದೆ. ಆಡಳಿತೆಯ ಸೂತ್ರಗಳು ಅವರ ಕೈಬಿಟ್ಟು ಹೋದುದು ಜನಹಿತಕಾರಕವಲ್ಲ. ಆದರೆ ಸಾಮಾನ್ಯ ಮನುಷ್ಯನಿಗೆ ತಿಳಿಯದಿದ್ದಂಥ ವಿಶಿಷ್ಟ ದೃಷ್ಟಿಯಿಂದ ರಾಜಕಾರಣಿಗಳು ಇದೆಲ್ಲವನ್ನು ವಿಚಾರ ಮಾಡುತಿರಬಹುದು. ನಾನೇನು ಈ ಸಂಬಂಧದಲ್ಲಿ ಅಷ್ಟೊಂದು ತಜ್ಞನಲ್ಲ. ಆದರೆ ಇವೆಲ್ಲ ಘಟನೆಗಳು ದೇಶಕ್ಕಾಗಲಿ ಕಾಂಗ್ರೆಸ ಸಂಸ್ಥೆಗಾಗಲಿ ಕ್ಷೇಮಕರವಲ್ಲ ಎಂದು ಮಾತ್ರ ನಾನು ಹೇಳಬಲ್ಲೆ.

ವರ್ಧಾ    ಕಿ. ಘ. ಮಶ್ರೂವಾಲಾ
೮-೪-೪೯

---

ತೊರೆದು ಬಿಡುವ ಪ್ರಸಂಗದಲ್ಲಿ ಕೂಡ ಸಾಮೂಹಿಕ ಉತ್ಪಾತಗಳಿಲ್ಲದೆ ನಡೆಯಬಲ್ಲದು.

ಕೈನೂಲು ಮತ್ತು ಕೈಮಗ್ಗದ ಕೆಲಸದಿಂದಲೇ ಬಡವರ, ದಲಿತರ ಮತ್ತು ದುಃಖಿಗಳ ಉದ್ಧಾರವಲ್ಲದೆ ಬೇರೇತರಿಂದಲೂ ಸಾಧ್ಯವಿಲ್ಲೆಂದು ನನ್ನ ನಂಬಿಕೆ.

ವರ್ಧಾ,
೫-೪-೪೯    ಕಿ. ಘ. ಮಶ್ರೂವಾಲಾ.

## ಭಾಷಾನ್ವಯ ಪ್ರಾಂತರಚನೆ ಬಗ್ಗೆ ವರಿಷ್ಠ ಸಮಿತಿಯ ವರದಿ

ಭಾಷಾನ್ವಯ ಪ್ರಾಂತರಚನೆಯ ಬಗ್ಗೆ ವರಿಷ್ಠ ಸಮಿತಿಯ ವರದಿಯನ್ನು ಕೆಲ ಕಾಂಗ್ರೆಸ ಪತ್ರಿಕೆಗಳು ಎಷ್ಟೊಂದು ಉತ್ಸಾಹದಿಂದ ಸ್ವಾಗತಿಸಿದವೋ ಅಷ್ಟು ಸಹಜವಾಗಿ ನಾನು ಅದನ್ನು ಸ್ವಾಗತಿಸಲಾರೆ. ಭಿನ್ನಾಭಿಪ್ರಾಯ ಮತ್ತು [illegible]ಳವಳಿಯನ್ನು [illegible]ಗೊಳಿಸುವ ಬದಲು ವರದಿಯು ಅದನ್ನು ಬರಮಾಡಿದೆ. ಅದು ಮುಂದೆ ಮಾಡಿದ ತತ್ವಗಳು ಮತ್ತು ಅದು ಕೊಟ್ಟ ಸಲಹೆಯೂ ಒಳ್ಳೆಯವಾಗಿದ್ದರೂ ಚಳವಳಿಗಾರರಿಗೆ ಅದು ಮುಕ್ತದ್ವಾರವಿಟ್ಟಿದೆ. "ನಾವು ಮೇಲೆ ಹೇಳಿದ್ದು ಏನೇ ಇದ್ದರೂ ಜನಾಭಿಪ್ರಾಯವು ಪ್ರಚಂಡ ಪ್ರಮಾಣದಲ್ಲಿ ಸಂಘಟಿತವಾಗಿ ಒತ್ತಾಯ ಪಡಿಸಿದ್ದಾದರೆ ಸಾರ್ವಜನಿಕ ಬೇಡಿಕೆಯನ್ನು ಮನ್ನಿಸುವದರಲ್ಲಿರುವ ತೊಡಕುಗಳನ್ನು ಮತ್ತು ಅದರಿಂದಾಗುವ ಪರಿಣಾಮಗಳನ್ನು ಪುನರ್ವಿಮರ್ಶಿಸಲಿಕ್ಕೆ ಬೇಕಾಗುವದು ಮತ್ತು ಪ್ರಜಾತಂತ್ರವಾದಿಗಳಾದ ನಾವು ಅದಕ್ಕೆ ಒಪ್ಪಲೇಬೇಕಾಗುವದು. ಆದರೆ ಇಡೀ ಹಿಂದುಸ್ಥಾನದ ಹಿತವನ್ನನುಲಕ್ಷಿಸಿ ಕೆಲ ನಿರ್ಬಂಧಗಳನ್ನು ಹಾಕಬೇಕಾಗುವದು" ಎಂದು ಮುಂತಾಗಿ ಸಮಿತಿಯು ವಿಶದವಾಗಿ ಹೇಳಿದೆ.

ಚಳವಳಿಗಾರರು ಇದರ ಮರ್ಮವನ್ನು ತಿಳಿದುಕೊಂಡು ಇದನ್ನು ಕಾರ್ಯರೂಪದಲ್ಲಿ ತರಲಣಿಯಾಗುವರು!

ಪ್ರಜಾತಂತ್ರವಂತೂ ಆಯಿತು, ಬೇರಾವ ಬಗೆಯ ಸರಕಾರವಾದರೂ ಸಾರ್ವಜನಿಕಾಭಿಪ್ರಾಯವನ್ನು ಕೊನೆಗೆ ಮನ್ನಿಸಲೇಬೇಕಾಗುದು. ಆದರೆ ಪ್ರಜಾತಂತ್ರದಲ್ಲಿ ಸಾರ್ವಜನಿಕಾಭಿಪ್ರಾಯವನ್ನು ಮನ್ನಿಸುವ ಎರಡು ಮಾರ್ಗಗಳಿವೆ: ಮೊದಲನೆಯದಾಗಿ ಸಾರ್ವಜನಿಕಾಭಿಪ್ರಾಯವು ಒಳಿತಾಗಿರಲಿ ಇಲ್ಲವೆ ಕೆಡಕಾಗಿರಲಿ ಅದಕ್ಕೆ ಮನ್ನಣೆ ಕೊಟ್ಟು ಅದನ್ನು ಕಾರ್ಯರೂಪದಲ್ಲಿ ತರಬೇಕಾಗುವದು. ಇಂಥ ವಿಷಯಗಳು ನಮ್ಮ ಅಭಿಪ್ರಾಯದಂತೆ ಜನತೆಗೆ ಕಲ್ಯಾಣಕರವಾಗಿವೆ. ಇವುಗಳ ಹೊರತು ಯಾವನ್ನೂ ನಾವು ಮಾಡಲಾರೆವು, ಆದರೆ ಜನತೆಗೆ ಬೇರೆ ಯಾವದನ್ನಾದರೂ ಮಾಡಬೇಕಿದ್ದರೆ ನಾವು ಹೊರಬರುವೆವು; ಅದು ತಮಗೆ ಬೇಕಾದ ಪ್ರತಿನಿಧಿಗಳನ್ನಾರಿಸಿಕೊಳ್ಳಲಿ ಎಂದು ಹೇಳುವದೇ ಎರಡನೆಯ ಮಾರ್ಗವಾಗಿದೆ. ಈ ವಿಷಯದಲ್ಲಿ ಬುದ್ಧಿಪೂರ್ವಕವಾಗಿ ಸಲಹೆ ಕೊಟ್ಟ ಬಳಿಕ ಸಮಿತಿಯವರು ಮೊದಲನೆಯ ಮಾರ್ಗವನ್ನನುಸರಿಸದೆ ಎರಡನೆಯದನ್ನೇ ಹಿಡಿಯಬೇಕಿತ್ತು. ಕೆಲ ಹೊಸ ಪ್ರಾಂತಗಳ ರಚನೆಯನ್ನು ಕೆಲ ನಿರ್ಬಂಧಗಳೊಡನೆ ಮಾಡುವದಕ್ಕೆ ಸಮಿತಿಯು ಒಪ್ಪಿದ ಪರಿಮಿತಿಯಲ್ಲಿಯೆ ಅದರ ಕಾರ್ಯಕ್ರಮವನ್ನು ಗೊತ್ತುಪಡಿಸಿ ಗಡಿಗಳ ಮತ್ತು ದ್ವಿಭಾಷಾ ಪ್ರದೇಶಗಳ ಬಗ್ಗೆ ವಿಚಾರಣೆ ನಡೆಸಿ ತನ್ನ ನಿಶ್ಚಿತವಾದ ಮತ್ತು ವಿವರವಾದ ನಿರ್ಣಯವನ್ನು ಕೊಡಬೇಕಿದ್ದಿತು. ಈ ಸಮಿತಿಯು ದರ್ ಸಮಿತಿಯ ಮಾದರಿಯದಾಗಿರಲಿಲ್ಲ. ಈ ಸಮಿತಿಯಲ್ಲಿ ಜನತೆಯ ಮೂವರು ಅತ್ಯುಚ್ಚ [illegible] ಧುರೀಣರು ಮತ್ತು ಪ್ರತಿನಿಧಿಗಳು ಇರುವರು. ಜನರ ಪರವಾಗಿ ನಿರ್ಣಯ ಕೈಕೊಳ್ಳುವ ಅಧಿಕಾರವು ಅವರಿಗೆ ಇದ್ದಿತು. ಆದರೆ ಸಮಿತಿಯವರು ಹೀಗೆ ಮಾಡದೆ ಸರಕಾರದ ಇಲ್ಲವೆ ಯಾವುದೊಂದು ಸಂಸ್ಥೆಯ ಕಾರ್ಯದರ್ಶಿಗಳಂತೆ ತಿಳಿದುಕೊಂಡು ಕಾರ್ಯ ಮಾಡಲು ಪ್ರವೃತ್ತರಾಗಿದ್ದಾರೆ ಮತ್ತು ಮುಂದಿನದನ್ನೆಲ್ಲ ಹೆಚ್ಚು ಬಲಿಷ್ಠವಾದ ಗುಂಪಿನ ಇಚ್ಛೆಗೆ ಬಿಟ್ಟುಕೊಟ್ಟಿರುವರು.

ಪ್ರಾಂತಗಳ ಪುನರ್ರಚನೆಯು ಸಮಸ್ಯೆಯು ಸಂಸ್ಥಾನಗಳ ಸಮೀಕರಣ ಮತ್ತು ವಿಲಯನದ ಸಮಸ್ಯೆಗಳಂತೆಯೆ ಇದೆ. ಸಂಸ್ಥಾನ ಸಮೀಕರಣ ಪ್ರಶ್ನೆಯನ್ನು ಪರಿಷ್ಕರಿಸಿ ಬಿಡಿಸಿದರು ಮತ್ತು ಜನರು ನಿಷ್ಠೆಯಿಂದ ಅದನ್ನು ಒಪ್ಪಿಕೊಂಡಿರುವರು. ಇದಕ್ಕೆ ಕಾರಣವೆಂದರೆ ಈ ಯೆಲ್ಲ ಪ್ರಶ್ನೆಗಳು ತೀರ ಸೂಕ್ಷ್ಮ ಮತ್ತು ತೊಡಕಿನವಾಗಿದ್ದು ಸಾಮಾನ್ಯ ಜನರ ಬುದ್ಧಿಶಕ್ತಿಗೆ ನಿಲುಕದಂತಹವಾಗಿವೆ. ತಮ್ಮ ಧುರೀಣರೆ ಅವನ್ನು ಬಿಡಿಸಬೇಕೆಂದು ಅವರು ಬಿಟ್ಟುಗೊಡುತ್ತಾರೆ. ನಂದುರಬಾರದಲ್ಲಿಯ ಬಡ ಭಿಲ್ಲರು ತಾವು ಗುಜರಾಥದಲ್ಲಿ ಸೇರಬೇಕೊ ಇಲ್ಲವೆ ಮಹಾರಾಷ್ಟ್ರದಲ್ಲಿಯೊ ಎಂಬುದನ್ನು ಎಂತು ನಿರ್ಣಯಿಸಬಲ್ಲರು? ಅದು ತಮಗೆ ಸೇರಿದ್ದೆಂದು ಗುಜರಾಥಿ ಚಳವಳಿಗಾರರು ಹೇಳುವರು; ಮಹಾರಾಷ್ಟ್ರೀಯರು

( ೧೪ ನೇ ಪುಟ ನೋಡಿರಿ )

# ಸ ಮ ರ  ಸ ಮ ಸ್ಯೆ

ಹೋರಾಟವು ಜೀವನದಷ್ಟೇ ಹಳೆಯದು; ಆದರೆ ಸಮರವು ಮಾನವನ ಕುಲಕ್ಕೆ ಮಾತ್ರ ಅಂಟಿಕೊಂಡಿದೆ. ಅದು ನಿಸರ್ಗ ನಿಯಮವಲ್ಲ, ಮಾನವಸ್ವಭಾವದ ನಿಯಮವು ಕೂಡ ಅಲ್ಲ; ಆದರೂ ಅದು ಕೇವಲ ಮಾನವೀ ಸಂಗತಿಯಾಗಿದೆ. ಪ್ರಾಣಿಗಳು ಬೇರೆ ಜಾತಿಯ ಪ್ರಾಣಿಗಳೊಡನೆ ಹೋರಾಡುತ್ತವೆ. ಮಾನವನಾದರೋ ತನ್ನ ಕುಲದವರನ್ನೇ ಸಾವಿರಗಟ್ಟಲೆಯಿಂದ ಸಂಹರಿಸುವುದರಲ್ಲಿ ವೈಶಿಷ್ಟ್ಯ ಪಡೆದಿದ್ದಾನೆ.

ಸಮರವು ಮಾನವರಚನೆಯ ನೈಸರ್ಗಿಕ ಫಲಿತಾಂಶವೇ? ಹಾಗೆ ನಂಬಿದ ಮನುಷ್ಯರಿದ್ದರು; ಆದರೆ ಆ ಸಮಸ್ಯೆಯನ್ನು ಅಭ್ಯಸಿಸಿ ನೋಡಿದರೆ ಮನುಷ್ಯರು ಅಪೇಕ್ಷಿಸುವುದರಿಂದಲೇ ಅದು ಹೆಚ್ಚಾಗಿ ಅಸ್ತಿತ್ವದಲ್ಲಿದೆ ಎಂದು ಗೋಚರವಾಗುತ್ತದೆ. ಅಂಥ ಅಪೇಕ್ಷೆಯು ಸಂಪೂರ್ಣ ಶೂನ್ಯದಿಂದ ಉನ್ನತತೆಯ ಶಿಖರದ ವರೆಗೆ ಬೇರೆ ಬೇರೆ ಅಂಶಗಳಲ್ಲಿ ಪಸರಿಸಿದೆ; ಇತಿಹಾಸ ಅದನ್ನು ತೋರಿಸುತ್ತದೆ. ಚೀನ ಅದಕ್ಕೊಂದು ನಿದರ್ಶನ.

ಸಮರವೆಲ್ಲ ಸ್ವಭಾವತಃ ಅಮಾನುಷ. ದೈಹಿಕ ನರಳಾಟಕ್ಕಿಂತ ಹೆಚ್ಚಾಗಿ ಮಾನವ ಕುಲದಲ್ಲಿಯ ಅತ್ಯುದಾತ್ತವೂ ಅತ್ಯುನ್ನತವೂ ಎನಿಸಿದ ಎಲ್ಲವನ್ನೂ ನಾಶಗೊಳಿಸುವುದೇ ಅದರ ಅತಿ ದುಷ್ಟ ಲಕ್ಷಣ. ಸರಿ ತಪ್ಪು, ಒಳ್ಳೆಯದು ಕೆಟ್ಟದ್ದು ಎಂಬ ಭಾವನೆಗಳೆಲ್ಲವನ್ನೂ ಅದು ಜೀವಶಾಸ್ತ್ರದ ಪ್ರಕಾರವಿರುವ ಜಯದ ಧರ್ಮ್ಯತೆ ಮತ್ತು ಅಪಜಯದ ಪಾಪಮಯತೆಗಳ ಮಟ್ಟಕ್ಕೆ ಇಳಿಸಿಬಿಡುವುದು. ಗುರಿ ಅತಿ ಮುಖ್ಯ, ಆದರೆ ಅದರ ಸಾಧನಗಣ್ಯವೇ ಅಲ್ಲ.

ಬಹಳ ಕಾಲದಿಂದ ಮಾನವನ ಅತ್ಯಂತಿಕ ಧ್ಯೇಯದ ಬಗ್ಗೆ ಒಂದು ಒಮ್ಮತವಿತ್ತು. ಉತ್ತಮ ಸಮಾಜಸ್ಥಿತಿಯನ್ನು ಬಯಸುವವರೆಲ್ಲರಿಗೂ ಶಾಂತಿಯೇ ಸರ್ವ ಸಾಮಾನ್ಯವಾದ ಕನಸಾಗಿತ್ತು. ಅಂಥ ಸ್ಥಿತಿಗೊಯ್ಯುವ ಪ್ರತಿ ಮಾರ್ಗದಲ್ಲೂ ಒಮ್ಮೆ ಅಲ್ಲದಿದ್ದರಿನ್ನೊಮ್ಮೆ ಸಮರ, ಸಮರದ ಬೆದರಿಕೆ ಮತ್ತು ಸಮರ ಸಿದ್ಧತೆಗಳು ವಿಘ್ನವನ್ನು ತಂದೊಡ್ಡುತ್ತವೆ. ನಾಗರಿಕತೆ ಬೆಳೆದು ಬಂದ ಹಾಗೆ ಈ ಗುರಿಯು ದೂರ ದೂರ ಹೋಗಹತ್ತಿದೆ. ಎಲ್ಲ ನಾಗರಿಕ ಸಮಾಜಗಳೂ ಯುದ್ಧಪ್ರಿಯವೆನಿಸಿವೆ. ಎಸ್ಕಿಮೋಗಳು ಶಾಂತಿಪ್ರಿಯರಾದ ಜನತೆಯ ಒಂದು ಉದಾಹರಣೆಯಾಗಿದ್ದಾರೆ. ಏಶಿಯನ್ನರಿಗಿಂತ ಯುರೋಪಿಯನ್ನರೇ ಹೆಚ್ಚಾಗಿ ಯುದ್ಧದ ವೈಭವವನ್ನು ಕೊಂಡಾಡುತ್ತಾರೆ.

ಆದರೆ ಸಮರ ಬರಿಯ ಒಂದು ಸಾಮಾಜಿಕ ರೋಗವೇನು? ಅದರ ಕಾರಣಗಳನ್ನೂ ನಿವಾರಣ ಕ್ರಮಗಳನ್ನೂ ಅಭ್ಯಸಿಸಬೇಕಾದರೆ ನಾವು ಮಾನವಮನದ ರಚನೆಯ ಆಳವನ್ನು ಹೊಗಬೇಕು. ಸ್ಥೂಲವಾಗಿ ಹೇಳಬೇಕಾದರೆ ಸಾಮಾನ್ಯನು ಸಮರವನ್ನು ಸ್ವಾಗತಿಸುವಂತಹ ಯಾವ ಪರಿಸ್ಥಿತಿ ಪ್ರಕಾರಗಳು ಶಾಂತಿಕಾಲದಲ್ಲಿ ಇರುತ್ತವೆ ಎಂಬುದನ್ನು ನಾವು ತಿಳಿದುಕೊಳ್ಳಬೇಕು. ಅದುದರಿಂದ ಯುದ್ಧವೆಂಬುದು ಒಂದು ಏಕಾಕಿಯಾದ ಪ್ರಶ್ನೆಯಲ್ಲ; ಅದು ವಿವಿಧ ಅವ್ಯವಸ್ಥೆಗಳ ಒಂದು ಸಂಯುಕ್ತ ಸ್ವರೂಪವಾಗಿದೆ.

ಮೊಟ್ಟಮೊದಲು, ಸೈನಿಕರು ಮತ್ತು ತದಿತರರು ಕೂಡ ಶಾಂತಿಯ ಬೇಸರದಿಂದ ಮುಕ್ತರಾಗುವ ದೃಷ್ಟಿಯಿಂದ ಯುದ್ಧವನ್ನು ಸ್ವಾಗತಾರ್ಹ ಎಂದು ಬಗೆಯುತ್ತಾರೆ. ಸಮಾರೋಪ್ಯಮಗಳ ವಿಸ್ತರಣ, ಶತ್ರುಗಳ ಸ್ಥಿತಿಯ ವಿರುದ್ಧವಾಗಿ ಸರಕಾರ ಮಾಡುವ ಪ್ರಚಾರ ಮತ್ತು ಬೇರೆ ಬೇರೆ ಬಗೆಯ ವದಂತಿಗಳು ಇವುಗಳ ಬೆಸೆಯಿಂದ ಜೀವನವು ಹೆಚ್ಚು ರುಚಿಕರವೆನಿಸುತ್ತದೆ. ಕೃತಕವಾದ ಅಭಿವೃದ್ಧಿಯನ್ನು ಪ್ರೋತ್ಸಾಹಿಸಲಾಗುತ್ತದೆ. ಈ ಎಲ್ಲ ಸಂಗತಿಗಳು ಸಾಮಾನ್ಯನಿಗೆ ಸುಖ ಸಂತೋಷಗಳನ್ನು ಕೊಡುತ್ತವೆ. ಹಿಟ್ಲರನ ನ್ಯೂರೆಂಬರ್ಗ ಪರಿಷತ್ತು ಜನದಲ್ಲಿಯ ಯುದ್ಧಪ್ರಿಯರ ಬಲವನ್ನು ದುರುಪಯೋಗಪಡಿಸಿಕೊಳ್ಳಲು ಕೂಡಿಸಿದ್ದು ಇದಕ್ಕೊಂದು ನಿದರ್ಶನವಾಗಿದೆ. ತಮ್ಮ ಅಧಿಕಾರ ಲಾಲಸೆಯನ್ನು ತೃಪ್ತಿಪಡಿಸಿಕೊಳ್ಳಲು ಪ್ರಬಲ ವೀರರು ಅದಕ್ಕೆ ತಕ್ಕ ವಾಗ್ವೈಖರಿಯನ್ನು ಬಳಸುತ್ತಾರೆ. ಅದು ಮಾನವನಲ್ಲಿರುವ ಎಲ್ಲ ಉದಾತ್ತ ಗುಣಗಳನ್ನು ದುರ್ಬಲಗೊಳಿಸಿ ಅವನನ್ನು ಮಂತ್ರಮುಗ್ಧನನ್ನಾಗಿ ಮಾಡುತ್ತದೆ. ತನ್ನಂತೆಯೇ ಮನುಷ್ಯನಾಗಿರುವ ಶತ್ರುವಿನ ಬಗ್ಗೆ ಅವನು ತನ್ನಲ್ಲಿಯ ಎಲ್ಲ ಕನಿಕರವನ್ನೂ ಕಳೆದುಕೊಂಡುಬಿಡುತ್ತಾನೆ. ಇದು ಮಾನಸಿಕವಾದ ಅತ್ಯಾಚಾರಪದ್ಧತಿ.

ಕೆಟ್ಟ ಮಾದರಿಯ ರಾಷ್ಟ್ರೀಯತೆಯೇ ಇದರ ಸ್ವಾಭಾವಿಕವಾದ ಪರಿಣಾಮ. ಅದು ಮಾನಸಿಕವಾಗಿ ಹೆಚ್ಚು ತೃಪ್ತಿಕರವಾದುದು. ನೀಚೋಹಂಬುದ್ಧಿಗೆ ಅದು ಒಂದು ಒಳ್ಳೆಯ ಮಾರಕ ಮದ್ದು. ರಾಷ್ಟ್ರೀಯತೆಯ ಚಿಹ್ನವು ಸ್ವಾಭಿಮಾನವನ್ನು ಪ್ರತಿಬಿಂಬಿಸುವುದು. ಅದು ಮತ್ತೊಂದು ಉತ್ತೇಜಕವಾದ ಭಾವನೆ. ಅದರ ಅನುಯಾಯಿಗಳು ಒಂದೇ ಮೂರ್ತಿಯ ಆರಾಧಕರು, ಅವರಲ್ಲಿ ಇತರರನ್ನು ಅಪಯಶಕ್ಕೆ ಗುರಿಮಾಡುವ ಇಚ್ಛೆ ಉಂಟಾಗುತ್ತದೆ.

ಈ ತರದ ದ್ವೇಷವು ಯುದ್ಧಸಿದ್ಧತೆಯನ್ನೂ ಕೊನೆಯಲ್ಲಿ ಯುದ್ಧ ಮಾಡುವುದರ ಅನಿವಾರ್ಯತೆಯನ್ನೂ ತಂದೊಡ್ಡುತ್ತದೆ. ಯುದ್ಧಕಾಲದಲ್ಲಿ ಮೂರ್ತಿವೆತ್ತ ರಾಷ್ಟ್ರವು ಒಂದು ಅಪೂರ್ವ ದೇವತೆಯೆನಿಸುತ್ತದೆ. ಅದು ಧರ್ಮ ಕರ್ಮವನ್ನೂ ತ್ಯಾಗ ಬಲಿದಾನಗಳನ್ನೂ ಕೇಳುತ್ತದೆ. ಅದು ಶಕ್ತಿಯಲ್ಲಿ ಅತಿಮಾನವವಿದ್ದರೂ ನೀತಿಯಲ್ಲಿ ಅವ-ಮಾನವವಿರುತ್ತದೆ. ಅದರೊಡನೆ ಬರುವ ಪರಪೀಡೆಯು ಜಂಭ ಮತ್ತು ಪಾತಕಜನ್ಯ ಸಂತೋಷಗಳಿಗೆ ಪ್ರಕಟನಾವಕಾಶವನ್ನು ಕಲ್ಪಿಸಿಕೊಡುತ್ತದೆ. ಮಾನವನಲ್ಲಿಯ ನೀಚತ್ವವನ್ನು ಅದು ತೃಪ್ತಿಪಡಿಸುತ್ತದೆ. ದೇಶವು ಬಡಾಯಿ ಕೊಚ್ಚಿದರೆ ಅಥವಾ ಕದ್ದರೆ "ಒಳ್ಳೆಯ" ನಾಗರಿಕರು ಕೂಡ ಸಂತಸದ ಒಂದು ರೋಮಾಂಚನವನ್ನು ಹೊಂದುವರು. ಒಂದು ರಾಷ್ಟ್ರದ ಧ್ಯೇಯ ಎಷ್ಟೇ ಎತ್ತರದ್ದಾಗಿಲಿರ. ಯುದ್ಧಕಾಲದಲ್ಲಿ ಈ ಕ್ರಮ ನಡೆದೇ ನಡೆಯುತ್ತದೆ. ಮನಃಶಾಸ್ತ್ರಿಗಳ ಅನುಭವ ಮತ್ತು ನಿರೀಕ್ಷಣಗಳು, ಪ್ರತಿಯೊಬ್ಬನೂ ಮಾಡಬಾರದುದನ್ನು ಮಾಡುವುದನ್ನೇ ಬಹಳವಾಗಿ ಬಯಸುತ್ತಾನೆ, ಎಂಬುದನ್ನು ಸಿದ್ಧ ಮಾಡುತ್ತವೆ.

ಒಂದು ಬೆಲೆ ಬಾಳುವ ಪ್ರದೇಶವನ್ನು, ಸೈನಿಕ ದೃಷ್ಟಿಯಿಂದ ಮಹತ್ವವಿರುವ ಸ್ಥಳವನ್ನು, ಸುಲಭವಾಗಿ ರಕ್ಷಣೆ ಮಾಡಿಕೊಳ್ಳಲು ಮತ್ತು ಅದಕ್ಕೂ ಸುಲಭವಾಗಿ ಅಲ್ಲಿಂದ ದಾಳಿ ಮಾಡಲು ಅನುಕೂಲವಾಗಿರುವ ಗಡಿಯೊಂದನ್ನು ಪಡೆಯಲು ಕೆಲವು ಯುದ್ಧಗಳು ನಡೆಯುತ್ತವೆ; ಮತ್ತೆ ಕೆಲವು ಧಾರ್ಮಿಕ ಅಥವಾ ರಾಜಕೀಯ ಧ್ಯೇಯಗಳ ವಿಸ್ತರಣಕ್ಕಾಗಿ ನಡೆಯುತ್ತವೆ. ೨ನೆಯ ಪಕ್ಷದಲ್ಲಿ ಧ್ಯೇಯ ಸಾಧನೆಯ ದೃಷ್ಟಿಗೆ ಮಹತ್ವವಿರುವುದೇನೋ ನಿಜ, ಆದರೆ ತದಿತರವಾದ ಐಶ್ವರ್ಯ, ರಾಜ್ಯ ಮತ್ತು ವೈಭವಗಳ ಲೋಭ ಇವೂ ಕಾರಣಗಳಾಗುತ್ತವೆ.

ಎಲ್ಲ ಯುದ್ಧಗಳಲ್ಲೂ ಶಸ್ತ್ರಾಸ್ತ್ರಗಳು ಬಹಳ ಮುಖ್ಯ ಪಾತ್ರವಹಿಸುತ್ತವೆ. ರಾಜನೀತಿಜ್ಞರು ತಂತಮ್ಮ ನಾಡುಗಳಲ್ಲಿ ಶಸ್ತ್ರಾಸ್ತ್ರಗಳು ಸಂರಕ್ಷಣೆಗಾಗಿ ಮಾತ್ರ ಇರಬೇಕೆನ್ನುವರು; ಆದರೆ ಅವೇ ಪರದೇಶಗಳಲ್ಲಿದ್ದರೆ ಶಾಂತಿಗೆ ಅಪಾಯಕರ ಎನ್ನುತ್ತಾರೆ. ಈ ವಿಷಮ ಚಕ್ರವು ನಿರಂತರವಾಗಿ ಹರಡುತ್ತಿದೆ. ಇಡೀ ನಾಗರಿಕ ಪ್ರಪಂಚದಲ್ಲಿ ಈ ಸಂರಕ್ಷಣಕ್ರಮಗಳ ಓಟದ ಸ್ಪರ್ಧೆ ಸಾಗಿದೆ. ಅಂಥ ದ್ವೇಷ ಶಂಕೆಗಳ, ಭಯ ತಿರಸ್ಕಾರಗಳ ವಾತಾವರಣದಲ್ಲಿ ಒಂದು ಚಿಕ್ಕ ಜಗಳ ಕೂಡ್ಲ ಯುದ್ಧದಲ್ಲಿ ಪರಿಣಮಿಸಬಹುದಾಗಿದೆ. ಈ ಕ್ರಮಗಳಿಗಾಗಿ ದುಡಿವ ವಿಜ್ಞಾನಿಗಳು ನೈತಿಕವಾಗಿ ಬಹಳ ದುರ್ಬಲರೆಂದು ಹೇಳಬೇಕು. ಅವರು ರಾಜತಂತ್ರಜ್ಞರ ಬರಿಯ ಕೈಗೊಂಬೆಗಳಾಗಿದ್ದಾರೆ. ಆದರೆ ಹೊಸ ಹೊಸ ಬಗೆಯ ಶಸ್ತ್ರಾಸ್ತ್ರಗಳ ಅಭಿವೃದ್ಧಿಗಾಗಿ ಈಗ ಯುದ್ಧದ ಮೂಲಕ ನಿರ್ಣಯಿಸಲ್ಪಡುವ ಅನೇಕ ನಿರ್ಣಯಗಳನ್ನು ಸ್ನೇಹಯುಕ್ತ ಸಂಧಾನಗಳ ಮೂಲಕ ನಿರ್ಣಯಿಸಬಹುದಾಗಿದೆ. ಇಂದು ಸಮರಶಕ್ತಿಯಿಲ್ಲದ ದೇಶಗಳ ಮಾತಿಗೆ ಯಾವ ಬೆಲೆಯೂ ಇಲ್ಲ. ಅಂಥ ಅನೇಕ ದೇಶಗಳಲ್ಲಿ ಅತಿ ಜನಸಂಖ್ಯೆಯಿದೆ; ಆದರೆ ಸರಿಯಾದ ಅರ್ಥದಲ್ಲಿ ಅದು ಯುದ್ಧ ಮಾಡಲಾರದುದರಿಂದ ಅದರಲ್ಲಿಯ ಕೆಲ ಜನರು ಕೂಡ ಕಡಿಮೆ ಜನಸಂಖ್ಯೆ ಮತ್ತು ಅಧಿಕಾಹಾರವಿರುವ ಬೇರೆಯ ಯಾವ ಉಪನಿವೇಶಕ್ಕೂ ವಲಸೆ ಹೋಗಲಾರರು.

ಯುದ್ಧವನ್ನು ಬಹಿಷ್ಕರಿಸಬೇಕೆಂದು ಹೇಳುವ ಜನರಿಂದು ಅನೇಕರಿದ್ದಾರೆ; ಆದರೆ ಮಾನವಕುಲದ ಅತಿದೊಡ್ಡ ಶತ್ರುವಾದ ಇದನ್ನು ನಿರ್ನಾಮಗೊಳಿಸಲು ಯಾವ ಉಪಾಯವೂ ಹೊಳೆದಿಲ್ಲ. ಆಕ್ರಮಣವು ಹಾಗಾದರೆ ಮಾನವ ಸ್ವಭಾವದ ಒಂದು ಅಂಶವೆನ್ನಬೇಕಾಯಿತೇ? ಪ್ರೀತಿಸುವ, ತಿನ್ನುವ, ಕುಡಿಯುವ ಅವಶ್ಯಕತೆಯಂತೆ ಹಿಂಸಿಸುವ ಒಂದು ಮೂಲಭೂತ ಅವಶ್ಯಕತೆ ಇದೆಯೇ? ಹೀಗಿರಲಾರದೆಂದು ಭಾವಿಸುವ ಜನರಿದ್ದಾರೆ; ಏಕೆಂದರೆ, ಸರಳರೂ ಅನಾಗರಿಕರೂ ಆದ ಜನರು ಯುದ್ಧ ಮಾಡುವುದಿಲ್ಲ. ಆದರೆ ಅವರಲ್ಲಿ ಯುದ್ಧವಿಲ್ಲ, ಅದರ ಜೊತೆಗೆ ಶಾಂತಿಯೂ ಇಲ್ಲ. ಹೇಗೇ ಆಗಲಿ, ನಿಷ್ಕಾರಣ ಆಕ್ರಮಣವು ಮನುಷ್ಯಕುಲದ ರಕ್ತಗತ ಸ್ವಭಾವವಲ್ಲ. ಮನುಷ್ಯನಲ್ಲಿಯ ಆಕ್ರಮಣಶೀಲತೆಯನ್ನು ಯುದ್ಧೇತರ ಮಾರ್ಗಗಳಲ್ಲಿ ಪ್ರವಹಿಸುವಂತೆ ಮಾಡಬಹುದು.

ಶಾಂತಿಕಾಲದ ಪರಿಸ್ಥಿತಿಯಿಂದಲೇ ಯುದ್ಧ ಸಂಭವಿಸುತ್ತಿದೆ. ಶಾಂತಿಯೆಂದರೆ ಘರ್ಷಣವಿಲ್ಲದ ಅಭಾವ ಸ್ಥಿತಿಯಲ್ಲ. ಶಾಂತಿಯಲ್ಲಿ ಜಗಳಗಳನ್ನು ಘಟನಾತ್ಮಕ ಸಾಧನಗಳಿಂದ ಬಗೆಹರಿಸಲಾಗುತ್ತದೆ. ಮೂಲ ಕಾರಣವಾದ ಭಯ ದ್ವೇಷಗಳು ಒತ್ತರಿಸುವುವು. ಬಡ ಜೀವನಮಟ್ಟ, ಪ್ರತಿಷ್ಠಾಭಾವ, ಅಭಿಪ್ರಾಯ ಮತ್ತು ಪೂರ್ವಗ್ರಹ ಇವುಗಳಲ್ಲಿ ಅತೃಪ್ತಿ ಅಡಗಿರುತ್ತದೆ. ಪ್ರತಿಯೊಂದು ಮಗುವೂ ಸಂಸ್ಕಾರ, ವಿದ್ಯೆ, ಪತ್ರಿಕೆ, ಮತ್ತು ಮನೆಮನೆಯ ಸಂಭಾಷಣೆ ಇವುಗಳ ಮೂಲಕ ಯುದ್ಧದ ಚಿತ್ರವನ್ನು ಪೂರ್ವಭಾವಿಯಾಗಿ ಚಿತ್ರಿಸಿಕೊಳ್ಳುತ್ತದೆ; ಅವೆಲ್ಲವೂ ಅದನ್ನು ಬೆಳೆಸಲು ಸಹಕಾರಿಯಾಗುತ್ತವೆ. ಅನೇಕ ದೇಶಗಳಲ್ಲಿ ಜನಜನಿತವಾಗಿ ಯುದ್ಧ ಶಿಕ್ಷಣವನ್ನು ಕೊಡಲಾಗುತ್ತದೆ. ಕೆಲ ದೇಶಗಳು ನಿಸರ್ಗಸಿದ್ಧ ಶತ್ರುಗಳೆಂದು ಮಕ್ಕಳಿಗೆ ಹೇಳಿ ಕೊಡಲಾಗುತ್ತದೆ. ಕಾಲಕ್ರಮೇಣ ಈ ವಿರೋಧ ಭಾವವನ್ನು ಅತಿಶಯೋಕ್ತಿಗೇರಿಸುವುದರಿಂದ ಒಮ್ಮೆ ಒಂದು ಅವಕಾಶ ಸಿಕ್ಕಿತೆಂದರೆ ಆ ಕೂಡಲೆ ಶತ್ರುದೇಶದ ಮೇಲೆ ಯುದ್ಧ ಹೂಡುವ ಬುದ್ಧಿ ಅವಕ್ಕೆ ಹುಟ್ಟುತ್ತದೆ, ತರ್ಕದ ಒಂದು ಬಲವಾದ ವಿಪರ್ಯಾಸದಿಂದ ಈ ಭಾವಗಳೆಲ್ಲ ಜನ್ಮಸಹಜ ಎಂದು ತೋರುವಂತೆ ಮಾಡಲಾಗುತ್ತದೆ.

ಅದುದರಿಂದ ಒಂದು ಆಧುನಿಕ ರಾಜ್ಯವು ಮಾಡತಕ್ಕದೆಂದರೆ ಶಾಂತಿಕಾಲದ ಪರಿಸ್ಥಿತಿಯನ್ನು ಸುಧಾರಿಸುವುದೇ ಆಗಿದೆ. ಜನರು ತಮ್ಮ ಬೇಸರ, ಕಷ್ಟ ಮತ್ತು ಜೀವನ ಶಿಕ್ಷಣಗಳಿಂದ ಪಾರಾಗಲು ಯುದ್ಧವು ಸ್ವಾಗತಾರ್ಹವಾದ ಕೈವಲ್ಯವೆಂದು ತಿಳಿಯುವಂತಾಗಬಾರದು. ಜೀವನವನ್ನು ವಿಚಿತ್ರವಷ್ಟು ರುಚಿಕಟ್ಟಾಗಿ ಮಾಡಿ ಸಾಮಾನ್ಯನಿಗೆ ಜೀವನದಲ್ಲಿ ಕಾಣುವ ಶೂನ್ಯತೆ ಮತ್ತು ವ್ಯರ್ಥತೆಯನ್ನು ಹೋಗಲಾಡಿಸಬೇಕು. ವ್ಯಕ್ತಿಯ ಕರ್ತವ್ಯಗಳನ್ನು ಯುಕ್ತವಾಗಿ ಪುನರ್ವ್ಯವಸ್ಥೆಗೊಳಿಸುವುದರಿಂದಲೂ ಅದನ್ನು ಮಾಡಬಹುದು. ಶ್ರಮಕಾರ್ಯಗಳಲ್ಲಿ ವೈವಿಧ್ಯ ತರುವುದು ಒಂದು ಮುಖ್ಯ ಕ್ರಮ. ಜೀವನಕ್ಕೆ ಅರ್ಥ ತರುವ, ಗುರಿಯನ್ನು ನಿರ್ದೇಶಿಸುವ ತತ್ವವಾದರೂ ಬಹಳ ಸಹಾಯಕವಾಗಿದೆ. ಭಯಂಕರ ದುಷ್ಪರಿಣಾಮಗಳನ್ನು ಉಳಿದರೂ, ಯುದ್ಧಗಳು ಅವಕ್ಕೆ ಬಲಿಯಾದವರಿಗೆ ತರುವುದು ಕ್ಷಣಿಕ ಮುಕ್ತಿ, ಅದು ಮುಗಿದೊಡನೆಯೇ ಅರ್ಥಶೂನ್ಯತೆ ಮತ್ತಷ್ಟು ಪ್ರಖರವಾಗಿ ಏಳುತ್ತದೆ.

ನಿಜಸ್ಥಿತಿಗೆ ಹೆಚ್ಚು ಹೊಂದಿಕೆಯುಳ್ಳ ಹೊಸದೊಂದು ವಿಶ್ವಶಾಸ್ತ್ರ ಉದಿಸಬೇಕಾಗಿದೆ. ಯುದ್ಧವು ಮಧ್ಯಾಂತರೀಕರಣ, ಒಡಂಬಡಿಕೆ ಮತ್ತು ಚರ್ಚೆಗಳನ್ನು ತಿರಸ್ಕರಿಸುತ್ತದೆ. ಆದರೆ ಇವುಗಳ ಮೂಲಕ ಹೋದರೆ ಮಾತ್ರ ಮನುಷ್ಯರು ಉತ್ತಮ ರೀತಿಯಿಂದ ಬಾಳಬಹುದು. ಈ ಧ್ಯೇಯವನ್ನು ಸಾಧಿಸಲು ಮಕ್ಕಳಿಗೆ ಹೊಸದೂ ಉತ್ತಮವೂ ಆದ ಶಿಕ್ಷಣಕೊಡಬೇಕು ಮತ್ತು ದೊಡ್ಡವರಿಗೆ ಒಂದು ವಿಧದ ಸ್ವಶಿಕ್ಷಣ ಅಗತ್ಯ. ಇವುಗಳ ಮೂಲಕ ದೇಶಗಳಲ್ಲಿ ಉಂಟಾದ ಆಕ್ರಾಮಕ ಉಗ್ರತೆಗಳು ಹೆಚ್ಚು ಹೆಚ್ಚು ರಚನಾತ್ಮಕವಾದ ಮಾರ್ಗಗಳಲ್ಲಿ ಪ್ರವಹಿಸುವಂತಾಗಬಹುದು.

ಎಲ್ಲ ಬಗೆಯ ವೈಷಮ್ಯಗಳನ್ನೂ ಅಲಕ್ಷಿಸಬಾರದು, ಆದರೆ ಗುರುಗಳು ವೈಷಮ್ಯಜ್ಞಾನವು ಕರಿಯ ಬಿಳಿಯ, ಹಿಂದು ಮುಸಲ್ಮಾನ, ಅಥವಾ ದೊಡ್ಡವ ಬಡವರಲ್ಲಿ ಪರಸ್ಪರ ಉಗ್ರತೆಯನ್ನು ಉಂಟುಮಾಡದಂತೆ ನೋಡಿಕೊಳ್ಳಬೇಕು. ಪ್ರತಿಯೊಂದು ಮಗುವೂ ಸುಖ, ಸ್ವಾಭಿಮಾನ ಮತ್ತು ಸುರಕ್ಷಿತತೆಗಳ ವಾತಾವರಣದಲ್ಲಿರುವಂತೆ ಸರಕಾರ ನೋಡಿಕೊಳ್ಳಬೇಕು. ದಮನ, ಬಲಾತ್ಕಾರ ಮತ್ತು ಭಯಗಳು ನೀಚೋಹಂಬುದ್ಧಿಯನ್ನು ಬೆಳೆಸಿ ಕಾಲಾನಂತರ ದಂಡಾದಾಯಕ್ಕಾಗಿ ಕ್ರೌರ್ಯದಲ್ಲಿ ಅದು ಪ್ರಕಾಶವಾಗುತ್ತದೆ. ಆದುದರಿಂದ ಪ್ರೇಮ, ಸ್ವಾತಂತ್ರ್ಯ, ನಿಷ್ಠೆ ಮತ್ತು ನಿರ್ಭಯತೆಗಳನ್ನು ಅಧರಿಸಿ ಬದುಕುವ ಮತ್ತು ಕಾರ್ಯ ಮಾಡುವ ಹೊಸ ಜಾತೀಯ ಸ್ತ್ರೀ ಪುರುಷರು ಹೊರಬರಲು ಕಾಲವೀಗ ತಕ್ಕದ್ದಾಗಿದೆ. ಬಹಳ ಕಾಲ ನಾವೀಗ ಹಿಂಸಾ ಪದ್ಧತಿಗಳು ತರತಕ್ಕ ಗೆಲುವಿನ ಸ್ವರೂಪವನ್ನು ಕಂಡಿದ್ದೇವೆ. ಮಾನವ ಕುಲದ ಪರೀಕ್ಷೆಯಲ್ಲಿ ಅವುಗಳ ಶಕ್ತಿ ಉತ್ತೀರ್ಣವಾಗಿಲ್ಲ. ಅವುಗಳ ಅನುಸರಣೆ ನಮ್ಮನ್ನು ಅಂಧಕಾರ ಮತ್ತು ವಿನಾಶ ಮಾರ್ಗದತ್ತ ಕರೆದೊಯ್ಯುತ್ತದೆ. ಯೋಗ್ಯ ಧ್ಯೇಯದತ್ತ ಹೊಸ ಜನರು ಮಾನವ ಕುಲವನ್ನು ಕರೆದೊಯ್ಯಲಿ.

—ಸಾವಿತ್ರೀ ನಂದ

## ವ್ಯಾಪಾರಲೋಕ

### ಮುಂಬಯಿ ಶೇರಪೇಟೆ

ತಾ. ೧೪

ಈ ವಾರದಲ್ಲಿ ಪೇಟೆಯ ಇಳಿತ ಹಿಂದಿನ ವಾರಗಳಷ್ಟು ವಿಶೇಷವಾಗಿರದಿದ್ದರೂ ಇನ್ನೂ ಸುಧಾರಣೆ ಕಾಣಬಂದಿಲ್ಲ. ಇಂದಿನ ಬೆಲೆಗಳು ಇಂತಿದ್ದವು.

| | |
|---|---|
| ಡಾಯಿಂಗ್ | ೯೫೦-೦-೦ |
| ಕೋಹಿನೂರು | ೨೮೪-೦-೦ |
| ಸ್ವದೇಶಿ | ೨೯೪-೦-೦ |
| ಗೋಕಾಕ | ೨೭೩-೮-೦ |
| ಸೆಂಚುರಿ | ೨೫೧-೪-೦ |
| ಸಿಂಪ್ಲೆಕ್ಸ | ೧೭೫-೬-೦ |
| ಟಾಟಾ ಸ್ಟೀಲ ಡೆಫರ್ಡ | ೧೩೭೫-೦-೦ |
| ಇಂಡಿಯನ್ ಅಯರ್ನ್ | ೨೩-೦-೦ |
| ಬೇಲಾಪುರ ಸಕ್ಕರೆ | ೨೧೪ ೦ ೦ |
| ಸೆಂಟ್ರಲ ಬ್ಯಾಂಕ್ | ೮೩-೦-೦ |
| ಇಂಪೀರಿಯಲ್ ಬ್ಯಾಂಕ್(ಪೂರ್ಣ) | ೧೮೭೬-೪ ೦ |
| ಬ್ಯಾಂಕ ಆಫ್ ಇಂಡಿಯಾ | ೧೮೬-೫-೦ |

### ಚಿನ್ನ ಬೆಳ್ಳಿ

ಚಿನ್ನ ಬೆಳ್ಳಿ ದರದಲ್ಲಿ ಸ್ವಲ್ಪ ಏರಿಕೆಯಾಗಿದೆ.

| | |
|---|---|
| ಚಿನ್ನ ತಯಾರಿ | ೧೧೧-೧೦-೦ |
| ,, ವಾಯದಾ | ೧೦೯-೧೪-೦ |
| ಬೆಳ್ಳಿ ತಯಾರಿ | ೧೭೪ ೪-೦ |
| ವಾಯದಾ | ೧೭೪-೦-೦ |

### ಅರಳೆ

| | |
|---|---|
| ಮೇ | ೬೨೫-೪-೦ |
| ಜುಲೈ | ೬೨೪-೮-೦ |
| ಸೆಪ್ಟೆಂಬರ | ೬೨೪-೦-೦ |

### ಎಣ್ಣೆಕಾಳು

| | |
|---|---|
| ಶೇಂಗಾ | ೧೮೯-೪ ೦ |
| ಅಗಸೆ (ತಯಾರಿ) | ೨೯-೮-೦ |
| ,, (ವಾಯದಾ) | ೨೯ ೨-೦ |
| ,, ಎಣ್ಣೆ | ೧೮-೮-೦ |

### ಶಿವಮೊಗ್ಗೆ

ತಾ. ೮

| | |
|---|---|
| ದೇಶಾವರ ನಂ. ೧ (ಮಣಕ್ಕೆ) | ೩೦-೩೩ |
| ,, ೨ | ೨೬-೩೦ |
| ರಾಜಾ ಅಲವು | ೨೬-೩೦ |
| ತೊರಸಾಲು | ೨೫-೨೮ |
| ಬೆಟ್ಟವಂತಿ | ೧೮-೨೦ |
| ಬೆಟ್ಟೆ | ೧೬-೧೮ |
| ಸೀಗೆಕಾಯಿ | ೮೪ |

ಬೇಡಿಕೆ ಚನ್ನಾಗಿದೆ.

### ಹುಬ್ಬಳ್ಳಿ

ತಾ. ೧೩

ಜ. ಹತ್ತಿಕಾಳು (೧ ರೂ. ಗೆ) ವ್ಯಾಪಾರ ನಡೆದಿರುವದಿಲ್ಲ.

| | | | |
|---|---|---|---|
| ಕುಸುಬಿ | (ಬ. ಮಣಕ್ಕೆ) | ೧೫.೩-೦ | ೧೫-೬-೦ |
| ಅಗಸಿ | (ಚೀಲಕ್ಕೆ) | — | ೪೦-೦-೦ |
| ಔಡಲ | ,, | | ೩೯-೦-೦ |
| ಜ. ಹೆಸರು | ,, | ೪೨-೧೦-೮ | ೪೬-೮-೦ |
| ಕರಿ ಎಳ್ಳು | ,, | | ೬೪-೬೬ |
| ಬಿಳಿ ಎಳ್ಳು | ,, | | ೭೩ |
| ಕಡಲೆ | ,, | ೫೫-೫-೭ | ೫೫-೫-೭ |
| ಜ. ತೊಗರಿ | ,, | | ೩೦ ೩೧ |
| ಹುರಳಿ | ,, | | ೩೪ ೧೧ ೪ |
| ಕೆಂ. ಅಲಸಂದಿ | ,, | | ೫೫-೫೬ |
| ಬಿ. ಅಲಸಂದಿ | ,, | | ೫೬-೦-೦ |
| ಶೇಂಗಾ (ಹೇರು) | | | ೪೮ ೫೦ |
| ಶೇಂಗಾ ಕಾಳು | | | ೬೯—೭೦ |

(೧೩ ನೇ ಪುಟದಿಂದ ಬಂದದ್ದು)

ತಮ್ಮ ಭಾಗವೆಂದು ವಾದಿಸುವರು. ವರಿಷ್ಠರೆ ಈ ಪ್ರಶ್ನೆಯ ಇತ್ಯರ್ಥ ಮಾಡದಿದ್ದರೆ, ಧುರಂಧರಾಧಿಗಳು ಮತ್ತು ಮಹಾರಾಷ್ಟ್ರೀಯರಿಬ್ಬರು ನೂರು ಸಭೆಗಳನ್ನು ಸೇರಿಸಿ ಇನ್ನೂರು ವರದಿಗಳನ್ನು ಪತ್ರಿಕೆಗಳಿಗೆ ಕಳಿಸಿ ತಮ್ಮ ಶಕ್ತಿಯಿದ್ದಷ್ಟು ಕೂಗಾಟವೆಬ್ಬಿಸುವಡೆ ಇದರ ಪರಿಣಾಮವಾಗಬಲ್ಲದು ದೂರದಲ್ಲಿರುವ ಜನರು ಈ ವರದಿಗಳನ್ನು ನಂಬಿ ಆ ಪ್ರಶ್ನೆಯ ಇತ್ಯರ್ಥ ಮಾಡಿಕೊಳ್ಳುವರು. ನಾವು ಬಯಸುವ ಪ್ರಜಾತಂತ್ರದ ಮಾದರಿಯಿದೆಯೊ ಅಥವಾ ಇದೊಂದು ಬಗೆಯ ಕೂಟತಂತ್ರವೊ? ಪ್ರಚಂಡ ಪ್ರಮಾಣದಲ್ಲಿ ಬೇಡಿಕೆ ಬರುವ ವರೆಗೆ ದಾರಿ ಕಾಯದೆ, ಈ ಮೊದಲು ಬಿಡಿಸಿದ ಅನೇಕ ಪ್ರಶ್ನೆಗಳಿಗಿಂತ ಈ ಪ್ರಶ್ನೆಯು ಈ ಮೂವರು ವಿದ್ವಾನ್ ಧುರೀಣರಿಗೆ ಬಿಡಿಸಲು ಬಹಳ ಸುಲಭವಾಗಿತ್ತೆಂಬುದು ಖಚಿತವಾಗಿದೆ.

ವರ್ಧಾ ಕಿ. ಘ. ಮಶ್ರೂವಾಲಾ.
೯-೪-೪೯

## ಸಮಸ್ತ ಭಾರತ

### ಸಂಯುಕ್ತಪ್ರಾಂತ

ಬನಾರಸ ಸಂಸ್ಥಾನವನ್ನು ಯುಕ್ತಪ್ರಾಂತದಲ್ಲಿ ಲೀನಗೊಳಿಸುವ ಬಗ್ಗೆ ಬನಾರಸದ ಮಹಾರಾಜರು ಮತ್ತು ಮುಖ್ಯ ಮಂತ್ರಿಗಳಲ್ಲಿ ವಿಚಾರವಿನಿಮಯ ನಡೆಯಿತು.

ಆಜಮಗಡದ ನಾಗರಿಕರು ೧೧೧೧೧೧ ರೂ.ಗಳನ್ನು ಗಾಂಧಿ ನಿಧಿಗೆ ಸಮರ್ಪಿಸಿದರು. ಡಾ. ರಾಜೇಂದ್ರ ಪ್ರಸಾದರು ನಗರಕ್ಕೆ ಭೆಟ್ಟಿ ಕೊಟ್ಟಾಗ ಅವರ ಕೈಯಲ್ಲಿಯೆ ಈ ಹಣವನ್ನು ಕೊಡಲಾಯಿತು.

ಅಚಾರ್ಯ ಕೃಪಲಾನಿಯವರ ನಿರ್ದೇಶಕತ್ವದಲ್ಲಿ ನಡೆದಿರುವ ಯುಕ್ತಪ್ರಾಂತದ ಗಾಂಧಿ ಆಶ್ರಮವು ಸೇಗ್ವಾರಿಯಲ್ಲಿಯ ಲೋಕ ಸೇವಕ ಸಂಘದ ಮುಖ್ಯ ಶಿಬಿರಕ್ಕೆ ೩೦ ಸಾವಿರ ರೂಪಾಯಿ ಕಾಣಿಕೆ ಕೊಟ್ಟಿರುವರು. ಇನ್ನು ಮೇಲೆ ಇದು ಲೋಕ ಸೇವಕ ಸಂಘದ ಕಾರ್ಯಕರ್ತರಿಗೆ ಮಧ್ಯವರ್ತಿ ತರಬೇತಿ ಶಿಕ್ಷಣ ಕೇಂದ್ರವಾಗಿ ಪರಿಣಮಿಸುವದು.

ಬನಾರಸದ ಸಮೀಪದಲ್ಲಿರುವ ಬರ್ನಾದ ಹತ್ತಿರ ಪಂಜಾಬ ಎಕ್ಸಪ್ರೆಸ್ ಗಾಡಿಯು ಹಳಿ ತಪ್ಪಿ ಬಿದ್ದು ಅವಘಾತ ಸಂಭವಿಸಿ ಹತ್ತು ಜನರು ಮರಣ ಹೊಂದಿದ್ದು ೪೦ ಜನರಿಗೆ ಗಾಯಗಳಾಗಿವೆ. ಅವರಲ್ಲಿ ೪ ಜನರಿಗೆ ತೀವ್ರ ಗಾಯಗಳಾಗಿವೆ. ರೇಲ್ವೆ ಪ್ಲೇಟುಗಳನ್ನು ಕಿತ್ತಿದುದೆ ಅಪಘಾತಕ್ಕೆ ಕಾರಣವೆಂದು ಹೇಳಲಾಗುತ್ತದೆ. ಅಯೋಧ್ಯೆಯ ರಾಮೋತ್ಸವಕ್ಕೆ ಹೋಗಿದ್ದ ಯಾತ್ರಿಕರು ಮಾತ್ರ ಸುರಕ್ಷಿತ ಉಳಿದಿರುವರು.

ಬನಾರಸದ ಸ್ಮಶಾನಭೂಮಿಯ ಹತ್ತಿರ ನಿದ್ರೆಹತ್ತಿ ಮಲಗಿದ್ದ ಓರ್ವನನ್ನು ಕಳೆದ ಶುಕ್ರವಾರ ಜೀವಂತ ಸುಟ್ಟರು. ಅವನನ್ನು ಹಾಸಿಗೆಗೆ ಬಿಗಿದು ಮೇಲೆ ಎಣ್ಣೆ ಸುರುವಿ ಸುಡಲಾಯಿತು.

### ಮದರಾಸ

ಸಂಸ್ಥಾನ ಶಾಖೆಯ ಸಹಕಾರ್ಯದರ್ಶಿಗಳಾದ ಶ್ರೀ ಬೂಚರು ತ್ರಾವಣಕೋರ ಕೊಚ್ಚಿ ಸಂಸ್ಥಾನಗಳ ಸಮೀಕರಣ ಸಮಿತಿಯ ಅಧ್ಯಕ್ಷರಾಗಿ ಕಾರ್ಯ ಮಾಡುವರೆಂದು ತಿಳಿಯುತ್ತದೆ. ಶ್ರೀ ಬೂಚರು ಮೇ ತಿಂಗಳು ಪ್ರಾರಂಭದಿಂದ ಅಧಿಕಾರ ವಹಿಸಿಕೊಳ್ಳಬಹುದು.

### ಮುಂಬಯಿ

ಮುಂಬಯಿ ಪ್ರಗತಿಶೀಲದೇಖಕರ ಸಂಘದ ಜಾಫ್ರಿ ಮತ್ತು ಧಕ್ಕೆ ಕೆಲಸಗಾರ ಸಂಘದ ಪ್ರಧಾನ ಕಾರ್ಯದರ್ಶಿ ಗೋವಿಂದ ನಾರಾಯಣ ದೇವಡೇಕರ ಎಂಬ ಇಬ್ಬರು ಕಮ್ಯುನಿಸ್ಟ ಕಾರ್ಯಕರ್ತರನ್ನು ಪೋಲೀಸರು ಬಂಧಿಸಿ ಸ್ಥಾನಬದ್ಧತೆಯಲ್ಲಿ ಇಟ್ಟಿರುವರು.

ಪಶ್ಚಿಮ ಕರಾವಳಿಗುಂಟ ಸಾರಿಗೆ ನಡೆಸುವ ಹಡಗಗಳ ರಾಷ್ಟ್ರೀಕರಣ ಮಾಡಬೇಕೆಂದು ಸರಕಾರಕ್ಕೆ ಕೇಳಿಕೊಳ್ಳುವ ಗೊತ್ತುವಳಿಯನ್ನು ಮುಂಬಯಿ ಕಾರಪರೇಶನದವರು ಸ್ವೀಕರಿಸಿರುವರು. ಕಂಪನಿಯವರು ದರಗಳನ್ನು ಮೇಲಿಂದ ಮೇಲೆ ಏರಿಸಿ ಈಗ ೧೦೦ ಕ್ಕೆ ೨೦೫ ರಷ್ಟು ಹೆಚ್ಚಿಸಿರುವರೆಂದು ಶ್ರೀ ದಿನಕರ ದೇಸಾಯರು ಹೇಳಿದರು, ದರಗಳನ್ನು ಹೀಗೆ ಮಿತಿ ಮೀರಿ ಏರಿಸಿದ್ದೇ ಈ ಬಗೆಯ ಗೊತ್ತುವಳಿಗೆ ಕಾರಣ.

### ಹೊಸದಿಲ್ಲಿ

ನಿರಾಶ್ರಿತರಿಗೆ ಈ ವರೆಗೆ ಕೊಡಲಾಗುತಿದ್ದ ನಗದು ಭತ್ತೆ ಮತ್ತು ಪುಕ್ಕಟೆ ಆಹಾರ ಸೀದಾ ನಿಲ್ಲಿಸಿದ್ದರಿಂದ ಮತ್ತು ನಿರಾಶ್ರಿತರ ಶಿಬಿರವನ್ನು ಔದ್ಯೋಗಿಕ ಕಾರ್ಯಾಲಯವನ್ನಾಗಿ ಮಾರ್ಪಡಿಸದೆ ಇದ್ದುದರಿಂದ ದಿಲ್ಲಿಯಲ್ಲಿಯ ನಿರಾಶ್ರಿತ ಶಿಬಿರದಲ್ಲಿಯ ನಿರಾಶ್ರಿತರು ಅನ್ನಸತ್ಯಾಗ್ರಹ ಹೂಡಿರುವರಂತೆ– ಈ ಅನ್ನಸತ್ಯಾಗ್ರಹಿಗಳು ಶಿಬಿರವನ್ನು ಬಿಟ್ಟು ಹೋಗಬೇಕೆಂದು ಜಿಲ್ಹಾಧಿಕಾರಿಗಳು ವಿಧಿಸಿದ್ದರ ಮೇರೆಗೆ ಪೋಲೀಸರು ಅವರನ್ನು ದಿಲ್ಲಿಯಿಂದ ಒಂದು ಹಳ್ಳಿಗೆ ಒಯ್ದು ಬಿಟ್ಟಿರುವರು ಮತ್ತು ದಿಲ್ಲಿಗೆ ಬರಬಾರದೆಂದು ವಿಧಿಸಿರುವರು.

ಹಿಂದುಸ್ತಾನ ಟಾಯಿಮ್ಸ ಪತ್ರಿಕೆಯ ಸಂಪಾದಕರೂ ಅಖಿಲ ಭಾರತ ಸಂಪಾದಕರ ಪರಿಷತ್ತಿನ ಅಧ್ಯಕ್ಷರೂ ಆಗಿರುವ ಶ್ರೀ ದೇವದಾಸ ಗಾಂಧಿಯವರು ಯುಕ್ತರಾಷ್ಟ್ರ ಸಂಘದ ಸುದ್ದಿ ರಾಗು ಪತ್ರಿಕಾ ಸ್ವಾತಂತ್ರ್ಯ ಉಪಸಮಿತಿಯ ಸದಸ್ಯರಾಗಿ ಆರಿಸಲ್ಪಟ್ಟಿರುವರು– ಈ ಸದಸ್ಯರು ವೈಯಕ್ತಿಕವಾಗಿ ಆರಿಸಲ್ಪಡುವರಲ್ಲದೆ ರಾಷ್ಟ್ರದ ಪ್ರತಿನಿಧಿಗಳಿಂದಲ್ಲ. ಹಿಂದೆ ಯಾರಿಗೂ ಬೀಳದಷ್ಟು ಅಂದರೆ ೧೭ ಮತಗಳು ಬಿದ್ದು ಇವರು ಆರಿಸಿ ಬಂದರು.

ಪಾಕಿಸ್ತಾನಿಗಳು ಪೂರ್ವ ಪಂಜಾಬದ ಹಳ್ಳಿಗಳ ಮೇಲೆ ಮಾಡಿದ ದಾಳಿಯನ್ನು ಎದುರಿಸಿದ ಹಳ್ಳಿಗರಿಗೆ ಪಾರಿತೋಷಕಗಳನ್ನು, ದಾಳಿಯಿಂದ ಹಾನಿಗೊಂಡವರಿಗೆ ಪರಿಹಾರವನ್ನು ಕೊಡಬೇಕೆಂದು ಪೂರ್ವ ಪಂಜಾಬ ಸರಕಾರದವರು ನಿರ್ಧರಿಸಿದ್ದಾರೆ.

ಲಂಚಗುಳಿತನದ ಆರೋಪದ ಮೇಲೆ ವಿಂಧ್ಯ ಪ್ರದೇಶದ ಔದ್ಯೋಗಿಕ ಮಂತ್ರಿಗಳಾದ ರಾವ ಶಿವಬಹಾದ್ದೂರಸಿಂಗ ಇವರನ್ನು ಹಿಂದುಸ್ತಾನ ಸರಕಾರದ ಗೃಹಶಾಖೆಯ ವಿಶೇಷ ಪೋಲೀಸರು ಬಂಧಿಸಿರುವರು. ಜಿಲ್ಹಾ ಮ್ಯಾಜಿಸ್ಟ್ರೇಟರಾದ ಶ್ರೀ ಶಾಂತಿಲಾಲ ಆಹೂಜಾ ಇವರು ಒಂದು ಲಕ್ಷ ರೂಪಾಯಿ ಜಾಮೀನ ಮೇಲೆ ಅವರ ಬಿಡುಗಡೆ ಮಾಡಿದ್ದಾರೆ. ಆರೋಪದ ತಪಾಸಣೆಯಾಗುವವರೆಗೆ ದಿಲ್ಲಿಯನ್ನು ಬಿಡಕೂಡದೆಂದು ಅವರ ಮೇಲೆ ಹುಕುಮು ಜಾರಿ ಮಾಡಲಾಗಿದೆ.

ನಾಗರಿಕರಿಗೆ ಸೈನ್ಯ ಶಿಕ್ಷಣ ಕೊಡಲು ಹಿಂದೀ ಸೈನ್ಯ ಶಾಖೆಯವರು ದಿಲ್ಲಿ, ಲಖನೌ, ಝಾಂಸಿ, ಜಲಂದರ, ಅಂಬಾಲಾ, ಅಮೃತಸರ, ಕಲಕತ್ತಾ, ನಾಗಪೂರು, ಮದ್ರಾಸ, ಬೆಂಗಳೂರು ಕೊಯಿಮತ್ತೂರು, ಪುಣೆ ಮತ್ತು ಅಹಮ್ಮದಾಬಾದ ಈ ೧೪ ಕೇಂದ್ರಗಳಲ್ಲಿ ಇಷ್ಟರಲ್ಲಿಯೆ ತರಬೇತಿ ವರ್ಗಗಳನ್ನು ತೆರೆಯಲಿರುವರು.

ಬ್ರಹ್ಮದೇಶದ ಮುಖ್ಯ ಮಂತ್ರಿಗಳಾದ ಥಾಕಿನ ನೂ ಇವರು ಹಿಂದುಸ್ತಾನದ ಮುಖ್ಯ ಮಂತ್ರಿಗಳ ಆಮಂತ್ರಣದ ಮೇರೆಗೆ ಹಿಂದುಸ್ತಾನಕ್ಕೆ ಬಂದಿದ್ದು ಹನ್ನೆರಡನೆಯ ತಾರೀಕು ದಿಲ್ಲಿಯಲ್ಲಿ ಅವರನ್ನು ಸಂಭ್ರಮದಿಂದ ಸ್ವಾಗತಿಸಲಾಯಿತು.

ಪೂರ್ವ ಪಂಜಾಬದ ಬೇರೆ ಬೇರೆ ತುರಂಗಗಳಲ್ಲಿ ಅನ್ನಸತ್ಯಾಗ್ರಹ ಹೂಡಿದ ಆರ್. ಎಸ್. ಎಸ್ ಕೈದಿಗಳ ಸಹಾನುಭೂತಿಪರ ಭಿತ್ತಿಪತ್ರಿಕೆ ಹಂಚುತ್ತಿದ್ದ ಇಬ್ಬರನ್ನು ಅಂಬಾಲಾದಲ್ಲಿ ಪೋಲೀಸರು ಬಂಧಿಸಿದ್ದರು. ಆದರೆ ಅವರು ಕ್ಷಮೆ ಬೇಡಿದ್ದರಿಂದ ಬಿಡುಗಡೆ ಮಾಡಲಾಯಿತು.

ಹಿಂದೀ ಕ್ರಿಕೆಟ ಸಂಘದ ಕಪ್ತಾನರಾದ ಲಾಲಾ ಅಮರನಾಥರ ಮೇಲೆ ಹೊರಿಸಿದ ಶಿಸ್ತುಭಂಗ ಅಯೋಗ್ಯ ರೀತಿಯ ವರ್ತನೆಯ ಸಂಬಂಧದಲ್ಲಿ ಅಮರನಾಥರು ಪತ್ರಿಕಾ ಸುದ್ದಿಗಾರರಿಗೆ ಸಂದರ್ಶನ ಕೊಟ್ಟು, ಆರೋಪ ಸಿದ್ಧಪಡಿಸಲು ಅಹ್ವಾನ ಕೊಟ್ಟಿದ್ದಾರೆ.

### ಬಿಹಾರ

ಪಾಟಣಾದಿಂದ ನಾಲ್ಕು ಮೈಲು ಅಂತರದಲ್ಲಿ ಇರುವ ಪಾತಿಝಾ ಪಟ್ಟಣಕ್ಕೆ ಒಂದು ಊಗಿ ಹಡಗ ಅಪ್ಪಳಿಸಿದ್ದರಿಂದ ಅಪಘಾತ ಸಂಭವಿಸಿ ೨೦ ಪ್ರವಾಸಿಕರಿಗೆ ತೀವ್ರ ಸ್ವರೂಪದ ಗಾಯಗಳಾಗಿವೆ. ಬಿರುಗಾಳಿಗೆ ಸಿಕ್ಕಿದ್ದೇ ಅಪಘಾತಕ್ಕೆ ಕಾರಣ.

ಕಳೆದ ಹತ್ತು ವರುಷ ಇಲ್ಲದೆ ಇದ್ದ ಬಿರುಗಾಳಿ ಪಾಟಣಾ ನಗರದ ಮೇಲೆ ೧೧ ನೇ ತಾರೀಕು ಭರದಿಂದ ಬೀಸಿದ್ದರಿಂದ ಗಿಡಗಳು ಬಿದ್ದು ವಾಹನ ಸಂಚಾರ ಕಟ್ಟಾಗಿತ್ತು. ಮನೆಗಳ ಚಪ್ಪರಗಳು ಹಾರಿಹೋಗಿವೆ. ಸಂಪರ್ಕ ಸಂಬಂಧಗಳಿಲ್ಲ. ನಿರುಪಯುಕ್ತವಾಗಿ ಬಾಹ್ಯ ಜಗತ್ತಿನ ಸಂಬಂಧವೇ ತಪ್ಪಿದಂತಾಗಿತ್ತು. ಸುದೈವದಿಂದ ಪ್ರಾಣಾಪಾಯವೇನೂ ಸಂಭವಿಸಿಲ್ಲ.

### ಹೈದರಾಬಾದ

ಇಮ್ರೋಜ ಪತ್ರಿಕೆಯ ಸಂಪಾದಕ ಶೋಬುಲ್ಲಾಖಾನರ ಕೊಲೆಯ ಖಟ್ಲೆಯು ಹೈದರಾಬಾದದಲ್ಲಿ ೧೩ ನೇ ತಾರೀಕಿನಂದ ಪ್ರಾರಂಭವಾಗಿ ಆರೋಪ ಪತ್ರಿಕೆಗಳನ್ನು ಮಂಡಿಸುವದಕ್ಕಾಗಿ ೨೭ ಕ್ಕೆ ಮುಂಬರಿಯಿತು.

ಹೈದರಾಬಾದ ಕರ್ನಾಟಕದ ಗಡಿಯನ್ನು ನಿರ್ಣಯಿಸುವದಕ್ಕಾಗಿ ಹೈದ್ರಾಬಾದ ಕರ್ನಾಟಕ ಕಾಂಗ್ರೆಸ ಸಮಿತಿಯವರು ಶ್ರೀ ಕಪಟರಾಳ ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿರುವರು ಸಾಂಸ್ಕೃತಿಕ ಆರ್ಥಿಕ ಮೊದಲಾದ ವಿವರಗಳನ್ನು ಕಲೆಹಾಕಿ ಪ್ರಾಂತೀಯ ಕಾಂಗ್ರೆಸ ಸಮಿತಿಯನ್ನು ಬಲಪಡಿಸುವ ಉಪಾಯಗಳನ್ನು ಸೂಚಿಸಬೇಕೆಂದು ಈ ಸಮಿತಿಗೆ ಕೇಳಿಕೊಳ್ಳಲಾಗಿದೆ.

ಹೈದರಾಬಾದದಲ್ಲಿಯ ಕಮ್ಯುನಿಷ್ಟ ಕಾರ್ಯಕರ್ತರಾದ ಶ್ರೀಮತಿ ಕಾದಂಬರಿಬಾಯಿಯನ್ನು ಕಳೆದವಾರ ಚಿಟಗುಪ್ಪಿಯಲ್ಲಿ ಬಂಧಿಸಿ ಕಲಬುರ್ಗಿ ಜೇಲಿನಲ್ಲಿ ಸ್ಥಾನಬದ್ಧತೆಯಲ್ಲಿ ಇಡಲಾಗಿದೆ.

ಹೈದರಾಬಾದ ಪುರಂತ ನಾಟಕದ ಸೂತ್ರಧಾರ ಕಾಶೀಮ ರಜವಿಯ ವಿಚಾರಣೆ ಬೇಗನೆ ಪ್ರಾರಂಭವಾಗುವದಿದೆಯೆಂದು ತಿಳಿದು ಬರುತ್ತದೆ. ಈಗ ಉಸ್ಮಾನಾಬಾದದ ಕಲೆಕ್ಟರರಾಗಿರುವ ಧಾರವಾಡದ ಶ್ರೀ ಶಾಮರಾವ ಬೈತಮಂಗಳಕರ ಇವರ ಅಧ್ಯಕ್ಷತೆಯಲ್ಲಿ ಒಂದು ವಿಶೇಷ ನ್ಯಾಯಮಂಡಲವನ್ನು ನೇಮಿಸಲಾಗಿದೆ. ಈ ನ್ಯಾಯಮಂಡಲದವರು ಈ ಖಟ್ಲೆಯಲ್ಲದೆ ಇನ್ನೂ ಹಲವು ಖಟ್ಲೆಗಳನ್ನೂ ನಡೆಸುವರು.

## ಕರ್ನಾಟಕದಲ್ಲಿ

### ಧಾರವಾಡ ಜಿಲ್ಲೆ

ಮುಂದಿನವಾರ ಡಾ. ರಾಜೇಂದ್ರ ಪ್ರಸಾದರು ಹುಬ್ಬಳ್ಳಿಗೆ ಬರಲಿರುವದರಿಂದ ಅವರನ್ನು ತಕ್ಕರೀತಿಯಿಂದ ಸತ್ಕರಿಸುವ ಕುರಿತು ನಗರಾಧ್ಯಕ್ಷರ ಅಧ್ಯಕ್ಷತೆಯಲ್ಲಿ ಸಮಿತಿಯೊಂದು ಸ್ಥಾಪಿತವಾಗಿದೆ. ರಾಜೇಂದ್ರ ಬಾಬುಗಳು ಮುಖ್ಯವಾಗಿ ಗಾಂಧಿ ನಿಧಿ ಸಂಗ್ರಹದ ಬಗ್ಗೆ ಕರ್ನಾಟಕಕ್ಕೆ ಬರುತಿರುವದರಿಂದ ಗಾಂಧಿ ನಿಧಿಯನ್ನು ಹೆಚ್ಚಾಗಿ ಸಂಗ್ರಹಿಸಬೇಕೆಂದು ಗಾಂಧಿ ನಿಧಿ ಸಂಗ್ರಹ ಸಮಿತಿಯವರು ನಿರ್ಧರಿಸಿದ್ದಾರೆ.

ಹೈದರಾಬಾದದ ಶ್ರೀ ಭೀಮಾಚಾರ್ಯ ಚಿಮ್ಮಲಗಿಯವರು ತಮ್ಮ ಅರವತ್ತನೆಯ ವರ್ಷದ ಹುಟ್ಟು ಹಬ್ಬದ ನಿಮಿತ್ತ ಧಾರವಾಡದ ಮಿಂಚಿನಬಳ್ಳಿ ಸಂಸ್ಥೆಗೆ ೧೦೦ ರೂಪಾಯಿ ಕಾಣಿಕೆಯನ್ನು ಕಳಿಸಿದ್ದಾರೆ.

ಧಾರವಾಡದ ಪ್ರಸಿದ್ಧ ವರ್ತಕರೂ ಧರ್ಮ ಕಾರ್ಯಕ್ಕೆಕೊಡುಗೈಯಿಂದ ಧನಸಹಾಯ ಸಲ್ಲಿಸಿದವರೂ ಆಗಿದ್ದ ಶ್ರೀ ಮಟ್ಟಿ ಶಿವಪ್ಪನವರು ೯ ನೇ ತಾರೀಖು ಮುಂಜಾನೆ ಲಿಂಗೈಕ್ಯರಾದರು.

ಹೊಸರಿತ್ತಿ ಪಂಚಾಯತಿಯ ಚುನಾವಣೆಯು ೩ನೇ ತಾರೀಕಿನ ದಿವಸ ನಡೆಯಿತು. ಚುನಾವಣೆಯ ದಿವಸ ಮತ್ತು ಅದರ ಹಿಂದಿನ ಮತ್ತು ಮುಂದಿನ ದಿನ ೧೪೪ ನೇ ಕಲಮು ಜಾರಿಯಲ್ಲಿ ಇದ್ದಿತು. ಚುನಾವಣೆ ಶಾಂತರೀತಿಯಿಂದ ಜರುಗಿ ಶ್ರೀ ಶಿದ್ಲಿಂಗಪ್ಪ ಜಂಗಳ ಮತ್ತು ಅವರ ಸಂಗಡಿಗರು ಬಹುಮತದಿಂದ ಆರಿಸಿ ಬಂದರು. ಶ್ರೀ ಹಣಮಣ್ಣಾ ಜಂಗಳ ಮತ್ತು ಅವರ ಸಂಗಡಿಗರು ಆರಿಸಿ ಬರಲಿಲ್ಲವೆಂದು ತಿಳಿಯುತ್ತದೆ.

ದಕ್ಷಿಣ ಭಾಗದ ಪ್ರಾಥಮಿಕ ಪ್ರಮಾಣಪತ್ರ ಪರೀಕ್ಷೆಯ ಪರಿಣಾಮವು ಇದೇ ತಿಂಗಳ ೩೦ ನೇ ತಾರೀಕು ಪ್ರಸಿದ್ಧವಾಗುವದೆಂದು ವಿದ್ಯಾಖಾತೆಯ ಅಧಿಕಾರಿಗಳು ಪ್ರಕಟಿಸುತ್ತಾರೆ.

ಗೋಪನಕೊಪ್ಪದ ಪ್ರಸಿದ್ಧ ನಾಗರಿಕರಾದ ಶ್ರೀ ಕಲ್ಲನಗೌಡರು ಪಾಟೀಲ ಇವರು ೧೨ ನೇ ತಾರೀಕು ಮಧ್ಯಾನ್ಹ ೨ ಗಂಟೆಗೆ ಅರ್ಧಾಂಗ ವಾಯುವಿನಿಂದ ತಮ್ಮ ಮನೆಯಲ್ಲಿ ಶಿವೈಕ್ಯರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಮರಣ ಸಮಯಕ್ಕೆ ಅವರಿಗೆ ೬೭ ವರ್ಷಗಳಾಗಿದ್ದವು. ಕಳೆದ ೨೭ ವರುಷಗಳಿಂದ ಅವರು ಒಂದೇ ಸವನೆ ಜಿಲ್ಲಾ ಲೋಕಲ್ ಬೋರ್ಡಿನ ಸದಸ್ಯರಾಗಿದ್ದರು. ಅಲ್ಲದೆ ಹಲವಾರು ಸಹಕಾರ ಸಂಸ್ಥೆಗಳಲ್ಲಿ ಸದಸ್ಯರೂ ಆಗಿದ್ದರು.

ಕರ್ನಾಟಕ ಏಕೀಕರಣ ಮಹಾಸಮಿತಿಯ ವಿಶೇಷ ಸಭೆಯು ತ್ರಿಮೂರ್ತಿಗಳ ವರದಿಯ ವಿಚಾರ ಮಾಡುವದಕ್ಕಾಗಿ ಇದೇ ೨೦ ನೆಯ್ಯ ತಾರೀಕು ಸಾಯಂಕಾಲ ೪ ಗಂಟೆಗೆ ಹುಬ್ಬಳ್ಳಿಯಲ್ಲಿ ಸೇರುವರು. ಸದಸ್ಯರೂ ಆಮಂತ್ರಿತರೂ ಬರಬೇಕೆಂದು ಕಾರ್ಯದರ್ಶಿಗಳು ಬಿನ್ನವಿಸುತ್ತಾರೆ.

ಮಸೀದೆಯ ಮುಂದೆ ವಾದ್ಯ ಬಾರಿಸುವ ಸಂಬಂಧದಲ್ಲಿ ಬ್ಯಾಡಗಿಯ ಹಿಂದೂ ಮುಸಲ್ಮಾನರಲ್ಲಿ ವ್ಯಾಜ್ಯ ನಡೆದಿದ್ದತಷ್ಟೆ ಈ ವ್ಯಾಜ್ಯದಲ್ಲಿ ದಿವಾಣಿ ಕೋರ್ಟಿನವರು ತೀರ್ಪು ಕೊಟ್ಟು ಮಸೂದೆಯ ಮುಂದೆ ವಾದ್ಯ ಬಾರಿಸಲು ಅಡ್ಡಿ ಇಲ್ಲೆಂದು ವಿಧಿಸಿರುವರು.

### ಬೆಳಗಾವಿ

ಕರ್ನಾಟಕವನ್ನು ಬಿಟ್ಟು ಆಂಧ್ರ ಪ್ರಾಂತವನ್ನು ಮಾತ್ರ ನಿರ್ಮಿಸಿದ್ದಾದರೆ ಕನ್ನಡಿಗರ ಅವಹೇಳನ ಮಾಡಿದಂತಾಗುವದು. ಹೊಸ ಘಟನೆಯು ಜಾರಿಯಲ್ಲಿ ಬರುವದರೊಳಗಾಗಿ ಮೈಸೂರನ್ನೊಳಗೊಂಡ ಇಲ್ಲವೆ ಅದನ್ನು ಬಿಟ್ಟು ಕರ್ನಾಟಕ ಪ್ರಾಂತ ನಿರ್ಮಾಣವಾಗಬೇಕು, ಕನ್ನಡಿಗರು ಇನ್ನು ತಡೆಯಲಾರರು ಎಂದು ಮುಂತಾಗಿ ಶ್ರೀ ದಾತಾರ ಬಳವಂತರಾಯರು ತ್ರಿಮೂರ್ತಿ ವರದಿಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತ ಮಾಡುತ್ತ ಸುದೀರ್ಘ ಲೇಖವೊಂದನ್ನು ಪ್ರಸಿದ್ಧಿಸಿರುವರು.

ಕಡಲೆ ಪ್ರಕರಣದಲ್ಲಿ ಮಾಮಲೇದಾರ ಮೊದಲಾದವರಿಗೆ ಶಿಕ್ಷೆಯಾಗಿ ಆಗ ಕಲೆಕ್ಟರರಾಗಿದ್ದ ಶ್ರೀ ಈಶ್ವರನ್ನರನ್ನುಹಾಗೇಬಿಟ್ಟದ್ದೇಕೆ ಎಂದು ಮುಂತಾಗಿ ಶ್ರೀ ಚಿಕ್ಕೋಡಿ ಅನಂತರಾಯರು ಮುಂಬಯಿ ಸರಕಾರದ ಕಾಯದೆ ಮಂತ್ರಿಗಳಾದ ಶ್ರೀ ದಿನಕರರಾವ ದೇಸಾಯರನ್ನು ಬೆಳಗಾವಿಯಲ್ಲಿ ಕೇಳಲಾಗಿ ಮಾನ್ಯ ಮಂತ್ರಿಗಳು ಶ್ರೀ ಈಶ್ವರನ್ನರಿಗೂ ಶಿಕ್ಷೆಯನ್ನು ವಿಧಿಸಿದ್ದು ಸಾರ್ವಜನಿಕ ಹಿತದೃಷ್ಟಿಯಿಂದ ಅದರ ಸ್ವರೂಪವನ್ನು ಬಹಿರಂಗಪಡಿಸುವುದಿಲ್ಲ ಎಂದು ಮುಂತಾಗಿ ಹೇಳಿದರೆಂದು ತಿಳಿಯುತ್ತದೆ.

ಮುಂಬಯಿ ಮಂತ್ರಿಮಂಡಳದಲ್ಲಿ ಗುಜರಾಥಿಗಳು ಮತ್ತು ಮರಾಷ್ಟ್ರೀಯರೆ ಹೆಚ್ಚಾಗಿರುವುದರಿಂದ ಕನ್ನಡಿಗರಲ್ಲಿ ಅಸಂತೋಷವುಂಟಾಗಿದೆ. ಆದುದರಿಂದ ಮಂತ್ರಿಮಂಡಳ ವಿಸ್ತರಣ ಯೋಜನೆಯಲ್ಲಿ ಕರ್ನಾಟಕಕ್ಕೆ ಇನ್ನು ಎರಡು ಸ್ಥಳ ಕೊಡಬೇಕೆಂದು ಶ್ರೀ ದಾತಾರ ಬಳವಂತರಾಯರು ಮುಖ್ಯ ಮಂತ್ರಿ ಖೇರರಿಗೆ ಪತ್ರ ಬರೆದು ಬಿನ್ನವಿಸಿಕೊಂಡಿರುವರು.

### ವಿಜಾಪುರ

ವಿಜಾಪುರದ ಕಾಂಗ್ರೆಸ ಕಾರ್ಯಕರ್ತರಾಗಿರುವ ಡಾ ಬಿ. ಕೆ ನಾಗೂರ ಇವರು ಜಿಲ್ಲಾ ಕಾಂಗ್ರೆಸ ಅಧ್ಯಕ್ಷರಾದ ಶ್ರೀ ರಾಜಾರಾಮ ದುಬೆ ಇವರ ಮೇಲೆ ಮಾಡಿದ ಖಟ್ಲೆಯನ್ನು ಹಿಂತೆಗೆದುಕೊಂಡಿದ್ದಾರೆ. ಈ ಸಂಬಂಧದಲ್ಲಿ ಶ್ರೀ ದುಬೆಯವರು ಕೃತಜ್ಞತೆಯನ್ನು ವ್ಯಕ್ತಪಡಿಸುತ್ತ ಹಿಂದೆ ದುರ್ದೈವೀ ಘಟನೆಯೊಂದು ನಡೆದುದಕ್ಕೆ ವಿಷಾದಪಟ್ಟು ಇನ್ನು ಮೇಲಾದರೂ ರಾಷ್ಟ್ರಕಾರ್ಯವು ಸುಗಮವಾಗಿ ಸಾಗುವ ಹಿರಿಯಾಸೆಯಿಂದ ಡಾ. ನಾಗೂರ ಇವರ ಸಹಕಾರವನ್ನು ಸ್ವಾಗತಿಸುತ್ತೇವೆಂದು ಬರೆದಿದ್ದಾರೆ.

ಬಬಲೇಶ್ವರ ಹಾಗು ಸಾರವಾಡ ಕೇಂದ್ರಗಳಲ್ಲಿ ಕಲೆಕ್ಟರರ ನೇತೃತ್ವದಲ್ಲಿ ಧಾನ್ಯ ಎತ್ತುವಳಿ ಕಾರ್ಯಕ್ರಮವು ಒಳ್ಳೆ ಉತ್ಸಾಹದಿಂದ ಪ್ರಾರಂಭವಾಯಿತು. ರೈತರು ಶೃಂಗರಿಸಿದ ಬಂಡಿಗಳಲ್ಲಿ ೨೧೦೦ ಚೀಲ ಜೋಳವನ್ನು ತಂದುಕೊಟ್ಟರು— ಶ್ರೀ ಚನಬಸಪ್ಪ ಅಂಬಲಿಯವರು, ಕಣಬೂರರು,ಮಾತಾಪಿ ರೈತರ ಕರ್ತವ್ಯವನ್ನು ತಿಳಿಸಿದರು. ಕಲೆಕ್ಟರರು ಧಾನ್ಯ ಎತ್ತುವಳಿಯ ಸಂಬಂಧದ ಸರಕಾರದ ಯೋಜನೆಯನ್ನು ವಿವರಿಸಿ ಎಲ್ಲರೂ ಇದಕ್ಕೆ ಸಹಾಯ ಮಾಡಬೇಕೆಂದು ಕೇಳಿಕೊಂಡರು.

ವಿಜಾಪುರ ಜಿಲ್ಹೆಯಲ್ಲಿ ಕಳೆದ ವಾರ ಅಲ್ಲಲ್ಲಿ ಅಣೇಕಲ್ಲ ಮಳೆ ಬಿದ್ದಿದೆ. ಅದರಿಂದ ಹತ್ತಿ ಬೆಳೆಗೆ ಸ್ವಲ್ಪ ಹಾನಿ ತಟ್ಟಿದ್ದರೂ ಹವೆಯಲ್ಲಿ ಕೆಲಮಟ್ಟಿಗೆ ತಂಪು ಆಗಿದೆ—

### ಉತ್ತರಕನ್ನಡ

ಬರುವ ಮೇ ತಿಂಗಳು ೭ ನೇ ತಾರೀಕಿಗೆ ಶಿರಸಿಯಲ್ಲಿ ಜರುಗುವ ಅಖಿಲ ಭಾರತ ಅಡಿಕೆ ಪರಿಷತ್ತನ್ನು ಉದ್ಘಾಟಿಸಲು ಶ್ರೀ ದಿವಾಕರ ರಂಗರಾಯರನ್ನು ಮತ್ತು ಪರಿಷತ್ತಿನ ಅಧ್ಯಕ್ಷಸ್ಥಾನವಹಿಸಲು ಶ್ರೀ ವಿ. ಎಸ್. ಕೃಷ್ಣಮೂರ್ತಿರಾವ ಇವರನ್ನು ಬಿನ್ನವಿಸಿಕೊಳ್ಳಲಾಗಿದೆಯೆಂದು ಸ್ವಾಗತ ಸಮಿತಿಯವರು ತಿಳಿಸುತ್ತಾರೆ.

ಮೇ ತಿಂಗಳು ಮೊದಲವಾರ ಶ್ರೀ ಸಾನೇ ಗುರೂಜಿಯವರು ಕಾರವಾರಕ್ಕೆ ಬರುವವರಿದ್ದು ಆ ಕಾಲಕ್ಕೆ ಅಲ್ಲಿಯ ಸಾಮ್ಯವಾದಿ ಕಾರ್ಯಕರ್ತರು ಅವರಿಗೆ ಹಮ್ಮಿಣಿಯನ್ನು ಅರ್ಪಿಸಲಿರುವರೆಂದು ತಿಳಿಯುತ್ತದೆ.

ಗೋವಾ ಸರಕಾರದವರು ಅನ್ನ ಧಾನ್ಯ ಸಂಗ್ರಹವನ್ನು ಹೆಚ್ಚಾಗಿ ಮಾಡಿದ್ದು ಮೂರು ತಿಂಗಳು ಸೀದಾ ಒಮ್ಮೆಲೆ ಒಯ್ಯುವ ಅನುಕೂಲತೆಯನ್ನು ಜನತೆಗೆ ಕಲ್ಪಿಸಿಕೊಟ್ಟಿದ್ದಾರೆ. ಇದರಿಂದ ಕಾರವಾರ ಕಳ್ಳಪೇಟೆಯಿಂದ ಗೋವಾಕ್ಕೆ ಹೋಗುತಿದ್ದ ಭತ್ತ ಅಕ್ಕಿಯ ಸಾಗಾಟ ಇನ್ನು ಮೇಲೆ ನಿಲ್ಲಬಹುದೆಂದು ನಿರೀಕ್ಷಿಸಲಾಗಿದೆ.

ಗೋವೆಯಿಂದ ಬರುವ ಚಿತ್ರಾಪುರ ಮೋಟರ ಡ್ರಾಯವರ ಹಾಗು ಕ್ಲೀನರನಲ್ಲಿ ಇದ್ದ ೧೨೦ ತೊಲಿ ಬಂಗಾರದ ಗಟ್ಟಿಗಳನ್ನು ಕಾರವಾರ ಪೋಲೀಸರು ವಶಪಡಿಸಿಕೊಂಡಿದ್ದಾರೆ. ಸುಂಕ ಕೊಡಲು ತಪ್ಪಿಸಿ ಬಂಗಾರವನ್ನು ತರಲಾಗಿತ್ತೆಂದು ಹೇಳಲಾಗುತ್ತದೆ.

ಗೋಕರ್ಣದ ಜಟಾಯು ತೀರ್ಥದಲ್ಲಿ ವಿಷಪ್ರಾಶನ ಮಾಡಿಸಿ ಒಗೆಯಲ್ಪಟ್ಟಿರೆಂದು ಹೇಳಲಾಗುತಿರುವ ಇನ್ನಿಬ್ಬರ ಹೆಣಗಳು ಗೋಕರ್ಣದಿಂದ ೨ ಮೈಲುಗಳ ಮೇಲೆ ಹತ್ತಿವೆಯೆಂದು ತಿಳಿಯುತ್ತದೆ.

### ಕನ್ನಡ ಸಂಸ್ಥಾನ

ಶಿವಮುಗ್ಗಿ ಮತ್ತು ಚಿಕ್ಕಮಗಳೂರು ಜಿಲ್ಹೆಯಲ್ಲಿ ಬರುವ ಜುಲೈ ತಿಂಗಳ ಮೊದಲನೇ ತಾರೀಕಿನಿಂದ ಸಂಪೂರ್ಣ ಮದ್ಯಪಾನ ಪ್ರತಿಬಂಧವು ಜಾರಿಯಲ್ಲಿ ಬರುವದು.

ಮೈಸೂರು ಸಂಸ್ಥಾನದಲ್ಲಿ ಇದು ವರೆಗೆ ೧೪೨೦೦೦೦ ಪಲ್ಲಭತ್ತವನ್ನು ಶೇಖರಿಸಲಾಗಿದೆ. ಒಂದು ಲಕ್ಷ ಪಲ್ಲ ರಾಗಿ ಮತ್ತು ೧೦ ಸಾವಿರ ಪಲ್ಲ ಜೋಳವನ್ನು ಶೇಖರಿಸಲಾಗಿದೆ ಎಂದು ಮೈಸೂರು ಆಹಾರ ಮಂತ್ರಿ ಶ್ರೀ ಮರಿಯಪ್ಪನವರು ಪತ್ರಿಕಾ ಸುದ್ದಿಗಾರರ ಸಭೆಯಲ್ಲಿ ಹೇಳಿದರು. ಇಷ್ಟಾದರೂ ಸಂಸ್ಥಾನಕ್ಕೆ ಇನ್ನೂ ೨೦೦೦ ಟನ್ ಅಹಾರ ಪದಾರ್ಥಗಳು ಕಡಮೆ ಬೀಳುವವು.

ಮೈಸೂರು ಸಂಸ್ಥಾನದಲ್ಲಿ ಆಹಾರೋತ್ಪಾದನೆಯನ್ನು ಹೆಚ್ಚಿಸುವ ಯೋಜನೆಯನ್ವಯ ೨೨ ಸಾವಿರ ಎಕರೆ ಕ್ಷೇತ್ರದಲ್ಲಿ ರಾಗಿಯನ್ನು ೨೪೭೩ ಎಕರೆ ಕ್ಷೇತ್ರದಲ್ಲಿ ಜೋಳವನ್ನು ೩೬೦೦೦ ಎಕರೆ ಕ್ಷೇತ್ರದಲ್ಲಿ ಭತ್ತವನ್ನು ಬೆಳಿಸಲಾಗಿದೆಯೆಂದು ಮಂತ್ರಿವರ್ಯ ಮರಿಯಪ್ಪನವರು ಸುದ್ದಿಗಾರರ ಸಭೆಯಲ್ಲಿ ಹೇಳಿದರು.

ಮಂತ್ರಿವರ್ಯ ನಿಯೋಗಿಯವರ ಅಧ್ಯಕ್ಷತೆಯಲ್ಲಿ ಸ್ಥಾಪಿತವಾಗಿರುವ ಹಿಂದುಸ್ಥಾನ ಸರಕಾರೀ ವ್ಯಾಪಾರ ಸಂಸ್ಥೆಯ ಸತ್ಯಶೋಧಕ ಸಮಿತಿಯಲ್ಲಿ ಘಟನಾಸಮಿತಿಯ ಸದಸ್ಯರಾಗಿರುವ ಶಿವಮೊಗ್ಗಿಯ ಶ್ರೀ ವಿ. ಎಸ್. ಕೃಷ್ಣಮೂರ್ತಿರಾವ ಇವರು ಸದಸ್ಯರಾಗಿ ಆರಿಸಲ್ಪಟ್ಟಿರುವರು.

ಮೈಸೂರು ಕಾಂಗ್ರೆಸ ಸೇವಾದಲ ಶಿಕ್ಷಣ ಶಿಬಿರದ ಪ್ರಾರಂಭ ಮಹೋತ್ಸವವು ಸಿದ್ಧಗಂಗಾಕ್ಷೇತ್ರದಲ್ಲಿ ಡಾ. ಎನ್. ಎಸ್. ಹರ್ಡೀಕರರ ಹಸ್ತದಿಂದ ವಿಜೃಂಭಣೆಯಿಂದ ಜರುಗಿತು ಶ್ರೀ ಶಿವಕುಮಾರ ಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು.

ಕಾಂಗ್ರೆಸ ಅಧ್ಯಕ್ಷರು ಮುಂಬಯಿ ಪತ್ರಿಕಾ ಪರಿಷತ್ತಿನಲ್ಲಿ ಮಾಡಿದ ಸ್ಪಷ್ಟೀಕರಣದೊಂದಿಗೆ ತ್ರಿಮೂರ್ತಿಗಳ ವರದಿಯನ್ನು ಹೋಲಿಸಿದರೆ ಭಾವೀ ಘಟನೆಗಳೇನು ಹಾಗು ಪ್ರತ್ಯೇಕ ಪ್ರಾಂತಗಳ ಪ್ರಚಾರಕರ ಪಾತ್ರವೇನು ಮುಂತಾದ್ದು ಸ್ಪಷ್ಟವಾಗುವದು. ಆದುದರಿಂದ ಜನತೆ ವಿಶೇಷತಃ ಮೈಸೂರಿನ ಜನತೆ ತಮ್ಮ ಸಂಕುಚಿತ ದೇಶಭಕ್ತಿ ಜಾತೀಯತೆ ಮುಂತಾದ ಕ್ಷುಲ್ಲಕ ಸಂಗತಿಗಳನ್ನು ತೊರೆದು ಪ್ರಸಂಗೋಚಿತವಾಗಿ ನಡೆದುಕೊಳ್ಳಬೇಕೆಂದು ಡಾ ಎನ್. ಎಸ್. ಹರ್ಡೀಕರರು ತ್ರಿಮೂರ್ತಿ ವರದಿಯ ಬಗ್ಗೆ ಅಭಿಪ್ರಾಯ ಪಡುತ್ತ ಹೇಳಿದರು.

ತ್ರಿಮೂರ್ತಿಗಳ ವರದಿಯಿಂದ ನಮ್ಮ ಪ್ರಾಂತವಾಗುವದು. ನಿಚ್ಚಳವಾದಂತಾಯಿತು ಆದುದರಿಂದ ಕರ್ನಾಟಕದ ಮುಖಂಡರು ಮೈಸೂರು ಪ್ರಾಂತದಲ್ಲಿ ಸಂಚರಿಸಿ ಒಕ್ಕೂಟ ಕರ್ನಾಟಕದಲ್ಲಿಅದುಕೂಡಿಕೊಳ್ಳುವಂತೆಪ್ರಚಾರ ಕಾರ್ಯ ಕೈಕೊಳ್ಳಬೇಕು ಅಂದರೆ ಕರ್ನಾಟಕ ಪ್ರಾಂತರಚನೆ ಮುಂದೂಡಲ್ಪಡಲಾರದು ಎಂದು ಮುಂತಾಗಿ ಶ್ರೀ ಹುಕ್ಕೇರಿಕರರು ತ್ರಿಮೂರ್ತಿ ವರದಿಯ ಬಗ್ಗೆ ಅಭಿಪ್ರಾಯ ಪಡುತ್ತ ಹೇಳಿದರು.

ಮಿರಜಿಯಲ್ಲಿ ಒಂದು ಬಾವಿಯ ಹತ್ತರ ೫೭ ತೊಲಿ ತೂಕದ ಒಂದು ಕೈಬಾಂಬು ಇದ್ದುದನ್ನು ನೋಡಿ ಆಟದ ವಸ್ತು ಇರಬೇಕೆಂದು ಒಬ್ಬ ಹುಡುಗ ಅದನ್ನು ಎತ್ತಿಕೊಂಡ. ಅಷ್ಟರಲ್ಲಿ ಪೋಲೀಸ ಸಬ್ ಇನಸ್ಪೆಕ್ಟರರು ಅದನ್ನು ಒಯ್ದು ಹೆಚ್ಚಿನ ವಿಚಾರಣೆ ನಡೆಸುತ್ತಾರೆ.

ತಮಗೆ ಪ್ರತ್ಯೇಕ ಕಾಂಗ್ರೆಸ ಸಮಿತಿಯು ಬೇಕೆಂದು ಮೈಸೂರು ಕಾಂಗ್ರೆಸ್ಸು ಕೇಳಿಕೊಂಡದ್ದಕ್ಕೆ ಕಾಂಗ್ರೆಸ ಕಾರ್ಯಸಮಿತಿಯವರು ನಕಾರಾತ್ಮಕ ಉತ್ತರ ಕೊಟ್ಟರುವರೆಂದು ತಿಳಿಯುತ್ತದೆ. ಕರ್ನಾಟಕ ಪ್ರಾಂತೀಯ ಕಾಂಗ್ರೆಸ ಸಮಿತಿಯು ಅಧ್ಯಕ್ಷರ ಧುರೀಣತ್ವದಲ್ಲಿ ಮೈಸೂರು ಸಂಸ್ಥಾನದಲ್ಲಿ ಅ್ಯಡಹಾಕ ಸಮಿತಿಯೊಂದನ್ನು ನೇಮಿಸಬೇಕೆಂದೂ ಕಾರ್ಯಸಮಿತಿಯ ಅಭಿಪ್ರಾಯವಿದೆಯೆಂದು ತಿಳಿಯುತ್ತದೆ.

ಶಿವಮೊಗ್ಗಿಯಲ್ಲಿ ಬರುವ ತಿಂಗಳ ಅಖಿಲ ಕರ್ನಾಟಕ ಸಮಾಜವಾದಿಗಳ ಪರಿಷತ್ತು ಸೇರುವದಿದ್ದು ಶ್ರೀರಾಮ ಪರಮೇಶ್ವರಪ್ಪನವರ ಅಧ್ಯಕ್ಷತೆಯಲ್ಲಿ ಸ್ವಾಗತ ಸಮಿತಿಯು ಏರ್ಪಟ್ಟಿದೆ. ಉದ್ಘಾಟನೆಗೆ ಆಚಾರ್ಯ ನರೇಂದ್ರದೇವ ಇಲ್ಲವೆ ಶ್ರೀಮತಿ ಅರುಣಾ ಅಸಫಅಲ್ಲಿಯವರು ಬರಬಹುದು.

ನಾನು ಬಡವರಿಗೆ ಮೋಸ ಮಾಡಿಲ್ಲ. ಕೆಲ ದೊಡ್ಡ ಮನುಷ್ಯರು ನನ್ನನ್ನು ಮೋಸಗೊಳಿಸಿದರು. ನಾನು ಹಣವನ್ನು ಬಚ್ಚಿಟ್ಟಿಲ್ಲ. ಮೋಸ ಮಾಡಬೇಕೆಂದು ನಾನು ಎಂದೂ ಬಯಸಿಲ್ಲ. ನಾಲ್ಕು ಲಕ್ಷ ರೂಪಾಯಿ ಕೊಡುವದು ಎಂದೂ ಶಕ್ಯವಿಲ್ಲ ಎಂದು ಮುಂತಾಗಿ ಧರ್ಮರತ್ನಾಕರ ಗೋಪಾಳರಾಯರು ಗೋಪಾಳರಾವ ವಿಚಾರಣಾ ಸಮಿತಿ ಎದುರಿಗೆ ಸಾಕ್ಷಿ ನುಡಿಯುತ್ತ ಹೇಳಿದರು.

ಅಖಿಲ ಭಾರತ ಸಂಪಾದಕರ ಪರಿಷತ್ತು ಬೆಂಗಳೂರಿನಲ್ಲಿ ಮೇ ತಿಂಗಳು ೧೬-೧೭ ಕ್ಕೆ ಕೂಡುವದು.

## ಶ್ರೀ ಮಂಜಯ್ಯ ಹೆಗ್ಗಡೆ ಇವರ ಅರವತ್ತನೆಯ ಹುಟ್ಟುಹಬ್ಬ

### ಬರೆಹಗಾರರಲ್ಲಿ ಬಿನ್ನಹ

ಶ್ರೀ ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರಿಗೆ ಅವರ ೬೦ ನೇ ವರ್ಷ ಪ್ರಾಯದ ಈ ಕಾಲದಲ್ಲಿ 'ಗ್ರಂಥಕಾಣಿಕೆ' ಕೊಟ್ಟು ಗೌರವಿಸಲು ಮೈಸೂರಿನ ಎಚ್. ಎನ್. ರಾಘವೇಂದ್ರಾಚಾರ್ಯರು ನಿಶ್ಚೈಸಿ ಸಮಿತಿ ಏರ್ಪಡಿಸಿದ್ದಾರೆ. ಇದೇ ಬರುವ ನವಂಬರದಲ್ಲಿ ಸುಮಾರು ೬೦೦ ಪುಟಗಳಿಗೆ ಮೀರಿದ ಸಚಿತ್ರವಾದ ಗ್ರಂಥವನ್ನು ಒಪ್ಪಿಸಬೇಕಾಗಿರುವದರಿಂದ ಈ ಮಹಾ ಸತ್ಕಾರ್ಯದಲ್ಲಿ ಅಖಿಲ ಕರ್ನಾಟಕದ ಲೇಖಕರು ಪೂರ್ಣ ಸಹಕರಿಸಬೇಕಾಗಿ ಪ್ರಾರ್ಥಿಸಿಕೊಳ್ಳಲಾಗಿದೆ.

ಸಾಹಿತ್ಯ, ಧರ್ಮ, ಕಲೆ, ರಾಜಕೀಯ, ವಿಜ್ಞಾನ ವಿಷಯಗಳ ಕುರಿತಾದ ೧/೪ ಸೀಟಿನ ೧೨ ಪುಟಗಳಿಗೆ ಮೀರಿದ, ಲೇಖಗಳಾಗಬೇಕು. ಆಯಾ ವಿಷಯದ ಪೂರ್ಣ ಪರಿಚಯವಿರುವ, ಪ್ರೌಢ ವಿದ್ಯಾಭ್ಯಾಸದ ವಿದ್ಯಾರ್ಥಿಗಳಿಗೆ ಸಹಕಾರವಾಗುವ ಲೇಖನಗಳಾಗಬೇಕು. ಈ ವರೆಗೆ ಪ್ರಕಟವಾಗದ, ಭಾಷಾಂತರವಲ್ಲದ, ಅಖಂಡ ಕರ್ನಾಟಕಕ್ಕೆ ಸಂಬಂಧಪಡುವ ಸಂಶೋಧಕವೂ ಸಂಗ್ರಾಹಕವೂ ಆದ ಲೇಖನಗಳಾಗಿರಬೇಕು.

ಎಪ್ರಿಲ್ ೧೫ ರೊಳಗಾಗಿ ಲೇಖನದ ಶಿರೋನಾಮೆಯನ್ನು ತಿಳುಹಿಸಿ ಮೇ ೧೫ ರೊಳಗಾಗಿ ಲೇಖನಗಳು ಬರುವಂತೆ ಕಳುಹಿಸಬೇಕು. ಗ್ರಂಥದ ಉದ್ದೇಶ ಗೌರವಗಳಿಗಾಗಿ ಅನುಚಿತವಾದ ಮತ್ತು ತಡವಾಗಿ ಬಂದ ಲೇಖನಗಳನ್ನು ಸ್ವೀಕರಿಸುವದಿಲ್ಲ. ಲೇಖನಗಳನ್ನು ಶ್ರೀ ಡಿ. ಪುಟ್ಟಸ್ವಾಮಿ ಎಡ್ವೋಕೇಟ್, ವೀರಭವನ- ಮಂಗಳೂರ ದ. ಕ. ಎಂಬ ವಿಳಾಸಕ್ಕೆ ಕಳುಹಿಸುವದು ಎಂದು ಮುಂತಾಗಿ ಸಮಿತಿಯ ಪರವಾಗಿ ಬಿನ್ನವಿಸಿಕೊಳ್ಳಲಾಗಿದೆ.

## ಡಾ. ರಾಜೇಂದ್ರ ಪ್ರಸಾದರ ಕರ್ನಾಟಕ ಸಂಚಾರ

### ಕಾರ್ಯಕ್ರಮದ ವಿವರಗಳು

ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ. ರಾಜೇಂದ್ರ ಪ್ರಸಾದರು ಇದೇ ೨೪ ನೇ ತಾರೀಖಿನಿಂದ ೨೯ ನೇ ತಾರೀಖಿನ ವರೆಗೆ ಕರ್ನಾಟಕದಲ್ಲಿ ಸಂಚರಿಸಲಿರುವರು. ಅವರ ವಿವರವಾದ ಕಾರ್ಯಕ್ರಮವಿಂತಿದೆ.

ಡಾ. ರಾಜೇಂದ್ರ ಪ್ರಸಾದರು ೨೪ ನೇ ತಾರೀಖಿನ ಸಂಜೆಗೆ ವಿಮಾನದಿಂದ ಬೆಂಗಳೂರಿಗೆ ಆಗಮಿಸುವರು ಬೆಂಗಳೂರ ನಗರ ಹಾಗೂ ದಂಡಿನ ಪ್ರದೇಶದಲ್ಲಿ ಅವರು ಅಂದೇ ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡಿ ಗಾಂಧೀ ನಿಧಿಗೆ ಹಮ್ಮಿಣಿಗಳನ್ನು ಸ್ವೀಕರಿಸುವರು. ಮರುದಿನ ರೇಲ್ವೆಯಿಂದ ಮೈಸೂರಿಗೆ ಹೊರಟು ದಾರಿಯಲ್ಲಿ ನಿಲ್ದಾಣಗಳಲ್ಲೆಲ್ಲ ಗಾಂಧಿ ನಿಧಿಗೆ ಹಮ್ಮಿಣಿಗಳನ್ನು ಸ್ವೀಕರಿಸಿ ಅಂದು ಸಂಜೆ ಮೈಸೂರಲ್ಲಿ ಭಾಷಣ, ಹಮ್ಮಿಣಿ ಸ್ವೀಕಾರ ಕಾರ್ಯಕ್ರಮ ನಡೆಯುವದು. ನಂತರ ಕಾರಿನಲ್ಲಿ ಬೆಂಗಳೂರಿಗೆ ಹಿಂತಿರುಗುವರು.

ಅವರು ೨೬ ನೇ ತಾರೀಖಿನ ಮುಂಜಾನೆ ಗಾಡಿಯಿಂದ ಹುಬ್ಬಳ್ಳಿಗೆ ಹೊರಡುವರು. ದಾರಿಯಲ್ಲಿ ತುಮಕೂರ, ಅರಸೀಕೆರೆ, ಬೀರೂರು, ದಾವಣಗೆರೆ, ಬ್ಯಾಡಗಿ, ರಾಣಿಬೆನ್ನೂರ, ಹಾವೇರಿ, ಸವಣೂರ ಮುಂತಾದ ಎಲ್ಲ ನಿಲ್ದಾಣಗಳಲ್ಲಿ ಗಾಂಧೀ ಸ್ಮಾರಕ ನಿಧಿಗೆ ಹಣ ಶೇಖರಿಸುತ್ತ ಭಾಷಣ ಮಾಡುತ್ತ ಬರುವರು.

ಡಾ. ರಾಜೇಂದ್ರ ಪ್ರಸಾದರು ೨೭ ನೇ ತಾರೀಖಿನ ಮುಂಜಾನೆ ೮ ಗಂಟೆಗೆ ಹುಬ್ಬಳ್ಳಿಯಲ್ಲಿ ಭಾಷಣ, ನಿಧಿ ಸ್ವೀಕಾರದ ನಂತರ ೧೦ ಗಂಟೆಗೆ ಧಾರವಾಡದಲ್ಲಿ ನಿಧಿ ಸ್ವೀಕಾರ ಕಾರ್ಯಕ್ರಮವನ್ನು ಮುಗಿಸಿಕೊಂಡು ಬೆಳಗಾವಿಗೆ ತೆರಳುವರು. ಬೆಳಗಾವಿಯಲ್ಲಿ ಸಾರ್ವಜನಿಕ ಸಭೆಯಲ್ಲಿ ಭಾಷಣ ನಿಧಿ ಗ್ರಹಣ ಮಾಡಿಕೊಂಡು ಅಂದೇ ಸಂಜೆ ೫ ಗಂಟೆಗೆ ಕಾರಿನಿಂದ ಬಾಗಲಕೋಟೆಗೆ ಹೋಗುವರು.

ಡಾ. ರಾಜೇಂದ್ರ ಪ್ರಸಾದರು ೨೮ ನೇ ತಾರೀಖಿನ ಮುಂಜಾನೆ ೭ ರಿಂದ ೮ ಗಂಟೆಯ ವರೆಗೆ ಹಿಂದುಸ್ಥಾನಿ ಸೇವಾದಲದ ರಜತೋತ್ಸವ ಸಮಾರಂಭದಲ್ಲಿ ಭಾಗವಹಿಸಿ ನಂತರ ರೇಲ್ವೆಯಿಂದ ಗದಗಿಗೆ ತೆರಳುವರು. ಗದಗಿನಲ್ಲಿ ಅರ್ಧ ಗಂಟೆ ಉಳಿದು ಬೆಝವಾಡಾ ಗಾಡಿಯಿಂದ ಹೊಸಪೇಟೆಗೆ ಹೋಗುವರು. ಅಲ್ಲಿಂದ ಕಾರಿನಲ್ಲಿ ಬಳ್ಳಾರಿಗೆ ಪ್ರಯಾಣ ಬೆಳೆಸುವರು. ಬಳ್ಳಾರಿಯ ಕಾರ್ಯಕ್ರಮ ತೀರಿಸಿಕೊಂಡು ಗುಂಟಕಲ್ಲಿನಲ್ಲಿ ಸಂಜೆ ೬-೩೦ ಕ್ಕೆ ಮದ್ರಾಸ ಗಾಡಿಯನ್ನು ಹಿಡಿಯುವರು.

ಈ ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಮೋಹರೆಯವರು ಮುದ್ರಿಸಿ ಪ್ರಕಟಿಸಿದರು.